# ಅಪಾರಕರುಣೆ

ರಸಿಕರಂಗ

ಕಾವ್ಯಪ್ರಕಾಶನಸಮಿತಿ—೩

೧೯೫೧



ಸಾದಾಪ್ರತಿ ರೂ. ೧-೦-೦

ಉತ್ತಮಪ್ರತಿ ರೂ. ೧-೮-೦




ಮೂಡು ಪಡುವಲೆಂತೊ ಅಂತೆ
ಕೂಡಿರುವೆವು ಜೋಡಿಯಾಗಿ ಮೋಡಿಮಾಟದಿ
ಬೇಡಲೇನು, ಬೇಡ ಏನು
ನೇಹದೀ ಪವಾಡ ಮೆರೆಯಲಾಟದಿ.

ಬೇರೆ ಸಿಜವು, ನಿಜವು ಒಂದೆ
ಬೇರಿನೊಳದ ರಸವು ಒಂದು ಒಂದೆ ಎನ್ನುತ
ಬೇರೆಬೇರೆಯಾಗಿ ಸಾರಿ
ನಾವು ಇರುವ, ಇರವ ದಿವ್ಯತರವ ಗೈಯುತ.

—ರಸಿಕರಂಗ

# ಮುನ್ನುಡಿ

ಇದು ನನ್ನ ಎರಡನೆಯ ಕವನಸಂಗ್ರಹ. ‘ಬಾಸಿಗ’ದ ತರುವಾಯ ಕಳೆದ ಹತ್ತುವರುಷಗಳಲ್ಲಿ ರಚಿತವಾದ ಕೆಲವು ಕವನಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ಇನ್ನುಳಿದ ಕೆಲವನ್ನು ‘ಓಂ ಅಶಾಂತಿಃ’ ಎಂಬ ಇನ್ನೊಂದು ಸಂಗ್ರಹದಲ್ಲಿ ಅಳವಡಿಸಬೇಕೆಂದಿದೆ. ಈ ಸಂಗ್ರಹದಲ್ಲಿ ಪ್ರಕೃತಿ ಮತ್ತು ಪ್ರಪಂಚ ಎಂಬ ಎರಡು ವಿಭಾಗಗಳನ್ನು ಮಾಡಿದ್ದು ಕಾಣಬಹುದು. ಈ ವಿಭಾಗವನ್ನು ಮನಸ್ಸಿನಲ್ಲಿಟ್ಟು ಕವಿತೆಗಳನ್ನು ಬರೆದಿದೆ ಎಂದು ಇದರರ್ಥವಲ್ಲ. ಬೇರೆ ಬೇರೆ ಸಮಯ ಹಾಗೂ ಸಂನಿವೇಶಗಳಲ್ಲಿ ಬರೆದ ಕವಿತೆಗಳನ್ನು ಈ ಕ್ರಮದಲ್ಲಿ ಪೋಣಿಸಲಾಗಿದೆ ಎಂದು ತಿಳಿಯಬೇಕು. ‘ಬಾಸಿಗ’ದಂತೆ ಈ ಸಂಗ್ರಹದ ಕೊನೆಗೆ ‘ನೆರವು’ ಎಂಬುದನ್ನು ಬರೆದು ಟಿಪ್ಪಣಿಗಳ ನೆರವನ್ನು ಕೊಡಬೇಕೆಂಬ ಉದ್ದೇಶವಿತ್ತು. ಆದರೆ ಕಾಗದದ ತುಟ್ಟಿ, ಹಾಗೂ ಅಚ್ಚಿನ ಬೆಲೆಗಳು ಕೈಕಟ್ಟಿದವು. ಹಾಗೆ ನೋಡಿದರೆ ಇಂಥ ಸಂಗ್ರಹಗಳ ಪ್ರಕಾಶನವೇ ನನ್ನಂಥ ಪರಿಸ್ಥಿತಿಯಲ್ಲಿ ಒಂದು ಅಸಾಧ್ಯ ಸಾಹಸವಾಗಿದೆ.

‘ಕಾವ್ಯಪ್ರಕಾಶನಸಮಿತಿ’ಯ ಪರವಾಗಿ ಪ್ರಕಟವಾದ ಶ್ರೀ ವಿನಾಯಕರ ‘ಹಿಗ್ಗು’ ಮತ್ತು ‘ನನ್ನ ಕವಿತೆಗಳು’ ಇವುಗಳ ಮಾರಾಟದ ವಿಷಯದಲ್ಲಿ ಈವರೆಗಿನ ಅನುಭವ ಕಣ್ಣಮುಂದಿದೆ. ಮೂರನೆಯದಾಗಿ ಇದನ್ನು ಕವಿಯೇ ತನ್ನ ವೆಚ್ಚದಿಂದ ಅಚ್ಚಿಸುವುದೆಂದರೆ ಅನುಭವದಿಂದ ಪಾಠಕಲಿಯದಂತೆ ಎಂದು ತೋರಬಹುದು. ಆದರೂ ಕಾವ್ಯರಸಿಕರ ಬೆಂಬಲದಲ್ಲಿ ನನ್ನ ನಂಬಿಕೆಯಿದೆ. ಅವರು ಇನ್ನು ಮುಂದೆ ಇಂಥ ಸಂಗ್ರಹಗಳನ್ನು ಬೇಗ ಬೇಗ ಕೊಂಡು ಇದರಿಂದ ದೊರೆಯುವ ಹಣದಲ್ಲಿ ಮತ್ತೆ ಕೆಲವು ಸಂಗ್ರಹಗಳು ಪ್ರಕಟವಾಗುವಂತೆ ಸಹಾಯವಾಗುವರೆಂದು ಆಶಿಸುತ್ತೇನೆ.

ಇದರ ಹೊದಿಕೆಯ ಪುಟದ ಚಿತ್ರವನ್ನು ಮುದ್ದಾಗಿ ಬರೆದುಕೊಟ್ಟ ಶಕುಂತಲಾಕಲಾಕೇಂದ್ರದ ಮಿತ್ರರಿಗೂ ಅಚ್ಚುಕಟ್ಟಾಗಿ ಮುದ್ರಿಸಿದ ಶ್ರೀಗಣಪತಿ ಸಂಸ್ಥಾನ ಪ್ರೆಸ್ಸಿನ ಚಾಲಕರಿಗೂ ನಾನು ಕೃತಜ್ಞನಾಗಿದ್ದೇನೆ.

ವಿಶ್ರಾಮಬಾಗ, ಸಾಂಗಲಿ<br>೧೫-೩-೧೯೪೮

ರಸಿಕರಂಗ

# ಪರಿವಿಡಿ

---

## ಕೋರಿಕೆ *

ಸುತ್ತೆಲ್ಲ ಬೆಟ್ಟಗಳು ಬಿರುನೆಲದ ಬೆನಕಗಳು
ನಡುವಿಹುದು ಒಂದೆ ಹಿರಿಬಂಡೆಗಲ್ಲು
ಬಿರಿದದನು ಮೇಲೇರಿ ಬಂತೊಂದು ಚೆಲುದೇಟು
ಹೂವಾಗಿ ಹೊರಸೂಸೆ ಎದೆಯ ಸೊಲ್ಲು.

ನೇಸರನೆ ! ನಿಚ್ಚಬೆಳಗಿನ ಅಕ್ಷಯದ ನಿಧಿಯೆ !
ನಿನ್ನಿಂದ ಈ ನೆಲವು ಇದರ ಕಾವು
ನಿನ್ನ ಕರುಣೆಯ ಕಿರಣ ಕಾಯುತಿರಲೀ ದೇಟ
ಎತ್ತರದಿ ನಿಲೆ ತುಂಬಿಯುರಳೆ ಹೂವು.

—ರಸಿಕರಂಗ

* ಇದರಲ್ಲಿಯ ಭಾವವು ಹೊದಿಕೆಯ ಪುಟದಲ್ಲಿ ಚಿತ್ರರೂಪತಾಳಿದೆ.

# ೧. ಪ್ರಕೃತಿ

## ಅಪಾರಕರುಣೆ

ನಿನ್ನ ಪಾರಕರುಣೆಗಾಳವಿಲ್ಲ ಅಂತವಿಲ್ಲ ಲೋಕನಾಯಕ
ಮರೆಗೆ ನಿಂತು ಅರಿಯದಂತೆ ಆಡುತಿರುವೆ ನಿನ್ನ ಹಿರಿಯ ನಾಟಕ

ಹರುಷ ಹಾಲುಗಡಲು ಭವ್ಯವಾಗಿಲು ನಿನ್ನ
ಆಟಕತುಲರಂಗವು
ಅಲ್ಲಿ ಒರಗಿ ನಲಿಯುತಿರುವೆ ನಲಿಸುತಿರುವೆ
ಅದಕೆ ಇಲ್ಲ ಭಂಗವು ೧

ಅಂತರಿಕ್ಷದಲ್ಲನಂತ ತೇಜಗೋಲ-
ಗಳನು ತೂಗಬಿಟ್ಟೆಯೆ
ಬುವಿಯ ತೊಟ್ಟಿಲಲ್ಲಿ ಪಟ್ಟ ಜೀವಗಣಕೆ
ಮುತ್ತುಛಟ್ಟೆನಂತೆಯೆ. ೨

ಜಗಕೆ ಕಣ್ಣು ಜ್ಯೋತಿಯರಸ ಸೂರ್ಯನಿಹನು
ನಿನ್ನ ಕಾಂಬ ಕನ್ನಡಿ.
ಇರುಳು ಕಾಂತಿಮಾಯೆ ಹರಡಿ ಪತೆಯ ಮರೆಸಿ
ಮೆರೆವ ಚಂದ್ರಗಾರುಡಿ. ೩

ವಿಶ್ವವ್ಯಾಪಿ ಸನಿಯದಿದ್ದು ಘನ ಅಗಮ್ಯ
ನಿನ್ನ ಪರಿಯ ಸಾರುತ
ನೆಲವ ಸುತ್ತಿ ಸುಳಿಯುತಿರುವ ಲೋಕದುಸಿರು
ಗಾಳಿಎಂಥ ಅದ್ಭುತ! ೪

ಬೆಟ್ಟ ಕೊಳ್ಳ ಬಯಲು ದಿನ್ನೆ ಕಟ್ಟಿಕೊಂಡು
ತಿರುಗುತಿರುವ ಭೂಮಿಯು
ಭೂತ ಜಾತಕೆಂದು ನೀನು ಒಡಿಸಿಕೊಟ್ಟ
ವಿವಿಧ ಸುಖದ ಸೀಮೆಯು. ೫

ಹಳ್ಳಹೊಳೆಯು ದಿಡಗುಕಡಲ ರೂಪತಾಳಿ
ತೊಳಪ ನೀರಸೀರೆಯು
ಪತ್ತುಕಡೆಗೆ ಹರಿಯುತಿರುವ ನಿನ್ನ ತವದ
ಪರಮ ಪ್ರೀತಿಧಾರೆಯು ೬

ನೀರುಣಿಸಿಲು ಬೆರೆತು ಮೋಡನೆರವಿ ಹನಿಯು
ಬಸಿರನಾಂತು ಬಾನೊಳು
ವಿವಿಧವರ್ಣ ಕಾವಣವನು ರಚಿಸಿ ಮಳೆಯು
ಕರೆಯೆ ಚೆಂದ ಬುವಿಯೊಳು. ೭

ಮಳೆಯು ಕರೆಗೆ ನೆಲದ ಚೆಲುವು ಹುಲ್ಲು ಹಸುರು
ಹೂವು ಕುಸುರು ಆಗರೆ
ಬೆಳೆಯು ಅನ್ನಕಳೆಯು ಸೂಸಿ ಸೊಗಸೆ ಏನು
ಸವಿಯು ಬಾಳು ಸಾಗರೆ. ೮

ಪ್ರಕೃತಿಗತಿಗೆ ತಾಲದಂತೆ ಋತುಗಳಾರು
ನಿಯತಗತಿಯ ತಾಳಿವೆ
ಅವಕೆ ಒಲಿದು ಮರವು ಬಳ್ಳಿ ಹಣ್ಣುಹೂವ
ಸಲಿಸಿ ಸುಖಕೆ ಬಾಳಿವೆ. ೯

ಪ್ರಕೃತಿಯೀವುದುಂಡಸಂತ ಖಗಮೃಗಗಳು
ಮನುಜವೃಂದ ಬದುಕಿವೆ
ಅನ್ನದಿಂದ ಜನಿಸಿ ಬೆಳೆದು ಹರುಷದನ್ನ
ಬಯಸಿ ಜೀವ ನಡೆದಿವೆ. ೧೦

ದೇಹಯಂತ್ರ ನೇಹಮಂತ್ರ ಏನಿದು
ಬಿಸವಂದ ಎಂಥ ಮಾಟವೊ!
ಪುರವಿನೊಳದ ಅರಿವು ನೀನೆ ಸೂತ್ರವಿಡಿದು
ನಡೆಸುತಿರುವ ಆಟವೊ! ೧೧

ಬಲ್ಲೆನಯ್ಯ ನಿನ್ನ ರುದ್ರರೂಪವನ್ನು
ಸಾವುನೋವ ಜಾಲವ
ಬಲ್ಲೆನದನು ಮೀರಿ ಪೊರೆವ ನಿನ್ನ ಕೃಪೆಯ
ತಾಯಿತನದ ಗೆಲ್ಲವ. ೧೨

ಕ್ಷಣಿಕವೆಂಬ ಜಗದ ಪೆಣಿಕೆಯೊಳಗೆ ನೀನೆ
ನಿತ್ಯನಿರುತ ಪುರುಷನು
ಪ್ರಕೃತಿನಿಯತಿಗಳನು ಒಳಗುಮಾಡಿ ಆಳು-
ತಿರುವ ಪರಮಪುರುಷನು. ೧೩

ಸುತ್ತುಕಾಂಬ ಗೋಳು ಹಾಳು ನಮ್ಮ ಹುತ್ತ-
ದಲ್ಲಿ ನಾವೆ ಬರಿಸಿದಾ
ಹಾವ ವಿಷವು ಬದುಕಸವಿಯ ಕಲಕಿ ಮಲೆವು-
ದೆಂದಿನಿಂದಲೂ ಸದಾ. ೧೪

ಸೋಲುಗೆಲವು ನೋವು ನಲಿವು ನಿನ್ನ ಲೀಲೆ-
ಯೊಲವಿನೆರಡು ಮಗ್ಗುಲು
ಸೋತೆನೋತೆ ನಿನ್ನ ವಿಶ್ವಕ್ರೀಡೆ ನೋಡಿ
ಕಿರಿಯ ಬಾಳು ಹಿಗ್ಗಲು. ೧೫

ಬೇರೆ ಎಣಿಕೆ ದೂರಸಾರೆ ಆಗಿ ಶರಣ
ಬೇಡಿ ನಿನ್ನ ತಾರಣ
ನಡೆದೆ ಮುಂದೆ ನಿನ್ನ ವಿಶ್ವಲೀಲೆಗಾಗೆ
ನನ್ನ ಜಿಹ್ವೆ ಚಾರಣ. ೧೬

# ಪಡುವಣದ ಬಿರುಗಾಳಿ

ಹೋ ಬಂತು ಬಂತಕೋ ಭೂತಬೆಂತರದಂತೆ
ಪಡುವಣದ ಬಿರುಗಾಳಿ
ಚೈತ್ರಮಾಸದ ಕಾಳಿ
ಊದುವೊಲು ಭಂವ್ವೆಂದು ಬೀಸುಬೀಸುತ ಮುಂತೆ. ೧

ಸುಡುಬಿಸಿಲ ಕೊಡೆಬಿಡಿಸಿ ಬೇಸಗೆಯ ರವಿ ಮೆರೆಯೆ
ಜಡವು ಜಂಜಡವಾಗೆ
ಚೇತನವು ಕೊರಡಾಗೆ
ಮಂತ್ರಹಾಕಿದ ಹಾಗೆ ಮರವೆಲ್ಲ ಮಿಡುಕದಿರೆ. ೨

ಬಾನ ನಿಚ್ಚಣಿಯಿಂದ ನೇಸರನು ಇಳಿದಂತೆ
ಎಲ್ಲಿಂದಲೋ ನೆಗೆದು
ಧೀಂಕಿಡುತ ಧಿಗ್ಗಂದು
ಬಂತು ಝುಂಝಾವಾತ ನೆರೆಪಿ ತನ್ನಯ ಸಂತೆ. ೩

ಕಣ್ಣೆವೆಯ ಪಿಳುಕಿಸುತ ನೋಡುನೋಡುವ ಮುನ್ನ
ನೂರ್ಮಿಂಚು ವೇಗದಲಿ
ನೆಲದಿ ಹರಿದಾಡುತಲಿ
ಬಯಲಾಟ ಥಕಥೈಯ ಕುಣಿತ ಹೂಡಿತು ತನ್ನ. ೪

ಏನದ್ಭುತದ ಶಕುತಿ ವಾಯುದೇವನ ಮಾಯೆ!
ಯುಗಯುಗದಿ ಬಂಧಿಸಿದ
ಹರೆಯ ಹೊಸ ಹುಮ್ಮಸದ
ಹೋಳಿಯ ಹರಿ ಕಟ್ಟೊಡೆದು ಸೂಸಿದೊಲು ನೆಲತೋಯೆ. ೫

ಸೃಷ್ಟಿಮೊದಲಿಗೆ ಜಡದ ವಿವಿಧ ಚಿತ್ರವ ಬರೆದು
ಉಸಿರು ತುಂಬಿದ ಕ್ಷಣವೆ
ಚೇತನವು ಕಣಕಣವೆ
ಆದಂತೆ ಮುಂವಟ್ಟೆ ನೆಲದ ಚೇತನವರಿದು. ೬

ಗಾಳಿಹೊಯ್ಲಿಗೆ ಮರದ ಕೊಂಬುಕೊಂಬುಗಳೆಲ್ಲ
ನರ್ತಕಿಯ ದ್ರುತಗತಿಯ
ಶಿರದಂತೆ ದಳತತಿಯು
ಆಚೀಚೆ ತೂಗಾಡಿ ತೊನೆಯುತಿರೆ ದಣಿವಿಲ್ಲ. ೭

ಭುವಿಯ ಸೇವಕನಂತೆ ಬಂದ ಮಾರುತನಿಂದು
ಬೀದಿಕಸವನು ಗುಡಿಸಿ
ಧೂಳಿಪಟವನು ಬಿಡಿಸಿ
ಹೊಲಹೊಲದ ಕಳೆಕಿತ್ತಿ ಮುಂಬರುವ ಕಳೆತಂದು. ೮

ಮುಂಜುಮುಳಿತೆರೆಯಂತೆ ತೂರಿರುವ ಧೂಳಿಯಲಿ
ತರಗೆಲೆಯ ತರತರವು
ಬೆರೆತು ಹಾರುತಲಿಹವು
ತಿರುತಿರುಗಿ ತೆಗ್ಗಿನಲಿ ಬೀಳುತಲಿ ಪಾಳಿಯಲಿ. ೯

ಬರಿರೆಂಬೆಯಲಿ ಮೈಯ್ಯ ತೆರೆದು ನಿಂತಿಹ ಬಸರಿ
ಹಳತೆಲೆಯ ಕಳಚಿ ತಾ
ಗಾಳಿಯಾಟಕೆ ತೆರುತ
ಹೊಸ ಚಿಗುರುಗಳ ಚೆನ್ನ ಕನಸುಕಾಣುವ ಬಸುರಿ. ೧೦

ಹಿರಿ ಬಿಸಿಲನುಂಡುಂಡು ಮೈಯುಂಡ ಆಲಮರ
ಹಚ್ಚಹಸುರೆಲೆ ರಾಸಿ
ತುರುತುರುಗಿ ಹಂಬಲಿಸಿ
ಬಿರುಗಾಳಿಪೂರದಲಿ ತೂರುತಿದೆ ಕೆಲಹಸುರ. ೧೧

ಪ್ರಳಯದುನ್ಮಾದದಲಿ ತಾಂಡವದ ನಾದದಲಿ
ನವಸೃಷ್ಟಿಲೀಲೆಯನು
ಮೆರೆಯುತಿಹ ಶೂಲಿಯನು
ತೋರದಲೆ ತೋರುತಿದೆ ಬಿರುಗಾಳಿ ಮೋದದಲಿ. ೧೨

# ಬಯಲ ಮಾವು

( ಮುಕ್ತಛಂದದಲ್ಲಿ )

ಉರಿವುರಿವ ಬಿಸಿಲಲ್ಲಿ ಹಸುರು ಮುಂಬಿಯುತ ಮೆರೆವುದಕೊ
ಬಯಲಸೀಮೆಯ ಮಾವು !
ಎಂಥ ರಣರಣ ಬಿಸಿಲು !
ನಡುಬೇಸಗೆಯ ನಡುಹಗಲ ಸಮಯದಲಿ
ತೆರೆದ ಭೂಮಿಯ ಎದೆಗೆ ಕಟ್ಟುಗ್ರ ಕಿರಣಗಳು
ಕೋಟ್ಯಾವಧಿಯಾಗಿ ಬಂದೆರಗಿ
ಅಗ್ನಿಬಾಣದ ಹಾಗೆ ಚುಚ್ಚುತಿವೆ ಮುಚ್ಚುತಿವೆ.
ಕಾಣಬಾರದ ಬಿಳುಪು ಹೊಳಪು ನೆಲದಲ್ಲಿ ಮುಗಿಲಿನಲಿ.
ಸೂರ್ಯ ಸುಡುಸುಡುವ ಉರಿಗೊಂಡ,
ಕಂಡವರ ಕಣ್ಣು ಕಳೆಯುವ ಮೂರನೆಯ ಕಣ್ಣು ಕೆಂಡ.
ನೆಲವೆಲ್ಲ ಉರಿಯ ಮೇಲಿನ ಹಂಚು, ಕಾದ ಮಳಲು.
ಬಯಲೇ ಬಯಲು ಬಟಾಬಯಲು !
ಬೀದಿ ಕಂಟಿ ಬೇವುಗಳ ಬುಡದಲ್ಲಿ ಬಿಸಿಲಿಗೆ ಅದುರಿ ಮುದುರಿ
ನೆರಳು ನಿಂತಿದೆ ಕಪ್ಪುಮುಸುಡಿಯ ತೋರಿ ತೋರಲಾರದೆ.
ಗಾಳಿ ಸತ್ತ ಹೆಣ ಎನ್ನುತಿರೆ
ಆಗಾಗ ಚಿತೆಯ ಉರಿನಾಲಿಗೆಯಂತೆ ಸುಡುಸುಡುತ ಬೀಸುತಿದೆ,
'ಗಾಳಿಯನು ಬೇಡುವಿರ ಇನ್ನೊಮ್ಮೆ' ಎಂದು ಕೇಳುವ
ಕಿಡಿಗೇಡಿಯಂತೆ
ಮೋರೆಮೋರೆಗೆ ತಿವಿತಿವಿದು ಉರಿಪಂಜು ಹಿಡಿದು.
ಮರದಹಸಿರು ಮೊಗಕಂದಿದೆ, ಬಳ್ಳಿಬಾಡಿ ಸುರುಸುರುಟಿವೆ.
ಬೆವರು ಸುರಿಯುವ ಮೈಯ, ಉಸ್ಸೆಂದು ಉಸುರ್ಗರೆವ
ಜನವೆಲ್ಲ ಸಾಕುಸಾಕಾಗಿ ಸೋತು ಸೊಲ್ಲಡಗಿ ಹೋಗಿದೆ.

ಇಂಥ ಕಡುಬಿಸಿಲಲ್ಲಿ ಎಂಥ ಚೆಲುವಿನ ನೋಟ ಈ ಮಾವು ಮರವು!
ಉಗ್ರೋಗ್ರಬಿಸಿಲಲ್ಲಿ ಆಕೊ ಒಂಟಿಗಾಲಿನ ಮೇಲೆ
ಹಸುರು ಬಟ್ಟೆಯ ಹೊದೆದು ನಿಂತ ವೀರ ಧೀರ ತಪಸಿಯಂತೆ
ತೋರುವುದು.

ಬಾಡಿಲ್ಲ ಇದರ ಎಲೆ ಎಲೆಯಚ್ಚ ಹಸಿರು.
ನಾಲ್ಕು ದಿಕ್ಕಿಗೆ ತುಂಬಿ ನಿಂತಿವೆ ರಸರಸದ ರಂಜಣೆಗೆಯಾಗಿ.
ಏನಿದರ ತುಂಬುಕಳೆ, ನೋಟಕ್ಕೆ ಹಿರಿಹಬ್ಬ!
ಯಾರು ತಿದ್ದಿ ಮಾಡಿದರಿವರ ದುಂಡುತನದಂದವನ್ನು?
ಭೂರಮಣಿಯ ತಲೆತುರುಬಿನಂತೆ ದೂರದಿಂದ ತಲೆದೋರುವುದು.
ಹತ್ತಿರದೆ ಬರೆ ಹೂಕಾಯಿಗಳ ಹೊರೆ ಹೊರೆಯ ಅಲಂಕಾರವನುಗೈದು
ಪ್ರಸಾಧನಕಲೆಯ ಪರಮರಸಿಕೆ ಭೂರಮಣಿಯೇ
ಕಣ್ಣೆದಿರು ಎದ್ದು ನಿಂತಂತೆ ತೋರುವುದು.
ಬಿಸಿಲು ಹೆಚ್ಚಿದಂತಿವರ ಹಸಿರು ಹೆಚ್ಚುವುದು,
ಕರೆಕರೆಯಾಗಿ ಹೂಗೊಂಚಲು ಹೊರಯೋದುವುದು,
ಕಾಯಿಗಳ ಗೊಲೆಗೊಲೆಯು ಹಿರಿಹಿಗ್ಗಿ ತೂಗುವುದು,
ಮೈಯು ರಸ ತುಂಬಿ ತುಳುಕಾಡಿ ಹಸುರೆಲೆಯ ನಾಳನಾಳದಿ
ಹರಿಯುವುದು ಚಿಮ್ಮಿಚಿಮ್ಮಿ.

ಎಂಥ ಸೋಜಿಗ ಇದರ ಇರವು! ಎಲ್ಲಿಂದ ಬಂತಿದಕೆ ಈ ಬಲವು?
ಕಾಣದಿಹ ನೆಲದೊಡಲ ಒಳಒಳದಿ ಹಬ್ಬಿಕೊಂಡಿಹ ನೂರು ಬೇರುಗಳು
ನೆಲದಾಯ ಮೊಲೆಯುಂಡು ಅದರಿಂದೆ ಜೀವನರಸವನೆ ಮಾಡಿ
ಮೇಲೆ ಮೆರೆಯುವ ರಮ್ಯ ಮಾವಿಗೆ ನೀಡಿ
ಹೂವಿಗೆ ಕಂಪನು ಹಣ್ಣಿಗೆ ಸವಿಯನು ಎಲೆಗೆ ಪಚ್ಚೆಹಸಿರನು
ಸೂರೆಮಾಡುತಿವೆ ಉರಿವುರಿವ ಬಿಸಿಲ ಪರಿವೆಯಿಲ್ಲದವೆ.
ಬಿಳಿಬಿಸಿಲ ನಡುಹಸಿರೆ! ಬಯಲ ಮಾವೆ!
ನಿನ್ನ ಚಿತ್ರವು ನನ್ನ ಕಣ್ಣೊಳಗೆ ಕಟ್ಟಿಹುದು ಎದೆಯೊಳಗೆ ನಟ್ಟಿಹುದು
ಅಂತರಾಳದಿ ಸೇರಿ ಹೊಸ ಆಸೆ ಆಕಾಂಕ್ಷೆಗಳನು
ಧೈರ್ಯಸ್ಥೈರ್ಯಗಳನು ಊರಿಹುದು ಬಗೆಯಲ್ಲಿ.

ನೆಲದಿಂದ ಹುಟ್ಟಿ ನೆಲದ ಗರ್ಭದಿ ಸೇರಿದಾ ತ್ಯಾಗಮೂರ್ತಿ ಸೀತೆ
ಕಿಚ್ಚಿನಲಿ ಹೊಕ್ಕರೂ ಅಚ್ಚಳಿಯದುಳಿದು ಹೊಳೆದಂತೆ
ನೀನಿರುವೆ ಬೇಸಗೆಯ ಬೇಗೆಯಲಿ ಬೆಂದುಳಿದ
ಅಚ್ಚಹಸುರಿನ ನಿಚ್ಚನಿರಂತರ ಸೀತೆ, ತ್ಯಾಗಪೂತೆ!
ನೀ ತಾಳುವುದು ಉರಿಬಿಸಿಲು, ನೀನೀವುದು ಹಣ್ಣುಹಂಪಲು.
ನಿನ್ನ ನೋವು ಲೋಕಕೆ ನಲಿವು, ನೀ ತುಂಬ ಸಫಲ
ನಿನ್ನ ಸವಿಯುಂಡು ತೇಗಿತಣಿಯುವ ಜನವೂ ಸಫಲ.
ಇಂತೆನ್ನ ಬಾಳಾಗಲಿ. ಇಂತೆ ನಾ ಲೋಕದ ಬದುಕಾಗಲಿ.
ಸುತ್ತೆಲ್ಲ ಉರಿಹತ್ತಿ ಪ್ರಳಯವನು ಮುನ್ನರಿಪಂತೆ
ನಾಶವೆಲ್ಲೆಡೆಯಲ್ಲಿ ವ್ಯಾಪಿಸಿದರೇನು,
ಪ್ರೀತಿನೀತಿಗಳು ಲೋಪವಾಗಿರಲೇನು,
ಪರಿಸರವೆನ್ನ ದರ್ಶನವ ಧ್ಯೇಯಗಳನಣಕಿಸುತ
ನಿತ್ಯ ತಾಂಡವನೃತ್ಯವನು ಎಸಗಿ ಮಸಗಿದರೇನು,
ನಾ ನನಗೆ ಹಗೆಯಾಗಿ ತಿಳಿವು ತೂಕವ ತಪ್ಪಿ
ದೌರ್ಬಲ್ಯದಾಳಾಗಿ ಆಗಾಗ ಕುಸಿಬಿದ್ದರೇನು,
ಅಜೇಯ ಆತ್ಮದ, ಅವಿಚಲ ಶ್ರದ್ಧೆಯ ಅಳಿಯಲಾರದ
ಬಲವು ನನ್ನದಾಗಿರಲಿ.

ಕಾಣದೊಳಬೇರುಗಳು ಅದರ ರಸರುಚಿಯುಂಡುಂಡು
ಮೇಲುಬಾಳಿಗೆ ಪೈಮನಕೆ ನೀಡುತಿರಲಿ.
ಈ ಇರವು ಉತ್ಸಂಗಿ ಮೆರೆವ ಮುಗುಳುನಗೆಯಾಗಲಿ.
ನನ್ನಲಿಹ ಶಕ್ತಿಗಳು ತನಿಯರಳಿ ಸಫಲವಾಗಿ
ಲೋಕಕೂ ಸವಿನೀಡಿ ಸಾಫಲ್ಯಕೊಡಲಿ.
ಸುಖವಿಹುದು ಪ್ರೀತಿಯಲಿ, ಧೈರ್ಯದಲಿ, ತ್ಯಾಗದಲಿ,
ಸೇವೆಯಲಿ, ಲೀಲೆಯಲಿ ಎಂಬುದರಿಯಲಿ ನಾನು.
ಅರಿತಂತೆ ಇರುವುದಾಗಲಿ ನಿತ್ಯ. ಅದೆ ಸಿದ್ಧಿ. ಅದೆ ತೃಪ್ತಿ.

# ಉಗಾರದ ಹೊಳೆಯ ಬಳಿ

ಅದೊ ಉಗಾರ ಹೊಳೆಯ ಬಳಿಯ
ದಂಡೆಯಲ್ಲಿ ನಿಂತುನೋಡು
ಸಂಜೆಯಿತ್ತ ದರ್ಶನವನು
'ವಿಶ್ವವೆಲ್ಲ ಒಂದು ಗೂಡು!'

ಕೆಳಗೆ ಅಲ್ಲಿ ಹಿರಿಯ ಹೊಳೆಯು
ನೀಲವಸನ ಹಾಸಿ ಇಹುದು
ನಿಂತಹಾಗೆ ತೋರಿ ಮೆಲನೆ
ಸಂತವಾಗಿ ಹರಿಯುತಿಹುದು. ೧

ಪಟ್ಟನಡುವ ಬೇಸಗೆಯಲಿ
ಅಚ್ಚಹಸಿರು ತಡಿಯ ತಬ್ಬಿ
ಮೆರೆಯುತಿಹುದು ಕರೆಯುತಿಹುದು
ಅವರೆ ಬಳ್ಳಿಯಾಗಿ ಹಬ್ಬಿ. ೨

ಇಳಿಹೊತ್ತಿನ ಹೊನ್ನಕದಿರು
ಕಳಸವಿಟ್ಟು ಎಲ್ಲ ನೆಲಕೆ
ಹರಕೆಯೀವ ಹಿರಿಯನಾಗಿ
ತೆರಳುತಿಹುದು ತನ್ನ ಗೃಹಕೆ. ೩

ಮಂದ್ರದಿಂದ ತಾರವರೆಗೆ
ಸುಯ್ಯುತಿರುವ ಗಾಳಿಯಲ್ಲಿ
ಎಲ್ಲವೂ ಸಚೇತವಾಗಿ
ಬೆರೆಯಿತೊಂದು ಒಂದರಲ್ಲಿ. ೪

ಕೆನ್ನವೊನೆಯ ಹಸುರು ಕಣೆಯು
ಬಂತು ನೋಡು ಗಿಳಿಯ ಸಾಲು
ಮರದಿ ಮರಕೆ ಚಿಮ್ಮಿ ಹಾರಿ
ಗಳಪುತಿಹುದು ಕೆಳಗುಮೇಲು. ೫

ಚಿಟ್ಟಗುಬ್ಬಿ ಚೀರುತಿರಲು
ಚಣವು ನಿಲದೆ ಹಾರಾಡುತ
ಕಾಗೆಯುಸರ ಪಿಕದಿಂಚರ
ಕೇಳುತಿಹವು ಎಲ್ಲ ಬೆರೆತು. ೬

ಎಲ್ಲ ಅದಕೆ ಎದೆಯು ಅರಳಿ
ಧ್ಯಾನದಲ್ಲಿ ಲೀನವಾಗಿ
ಇರಲು, ಬಂತು ಹೊಳೆಯ ಮೇಲೆ
ಬೆಳ್ಳ ಹಕ್ಕಿ ಹಿಂಡು ಸಾಗಿ. ೭

ರೆಕ್ಕೆ ಬಿದಿರಿ ಹಾರಿ ತೂರಿ
ತೊರೆಯ ಕರೆಯ ತೀವನೆಲದಿ
ಪರಮಹಂಸ ನೆರವಿಯಂತೆ
ಕುಳಿತುಕೊಂಡು ಇಹುದು ಕೆಲದಿ. ೮

ಯಾವ ಗಹನ ಜಾನದಲ್ಲಿ
ಯಾವ ಅರಿದು ಯೋಚನೆಯಲಿ
ಎಂದು ಬಗೆಯೆ, ಬದುಕದೊಂದೆ
ಕಂಡಿತಾಚೆ ದಡದ ನೀರಲಿ. ೯

ಬದುಕಿನತ್ತ ಬೆಳ್ಳಹಕ್ಕಿ
ಹಿಗ್ಗುದುಂಬಿ ಹಾರಿ ತೆರಳೆ
ತಮವು ತನ್ನ ಸೆರಗಿನೊಳಗೆ
ತೆರೆಯನೆಲ್ಲ ಮುಚ್ಚಿ ಸುರುಳೆ— ೧೦

ಬೆಳಕಿನಲ್ಲಿ ಕತ್ತಲೆಯಲಿ
ಸವಿಯ ಸರದಿ ಅಪಸ್ವರದಿ
ಜೀವ ಜಡದಿ ಒಂದೆ ಭಾವ
ಒಂದೆ ಸುಖವು ತುಂಬೆ ಮನದಿ— ೧೧

ಕೇಳಿತೆನಗೆ ಮರಳಿ ಮರಳಿ
ಹಳೆಯಮಂತ್ರ, ಹೊಸತು ಹಾಡು!
“ ವಿಶ್ವವೆಲ್ಲ ಒಂದು ಗೂಡು
ವಿಶ್ವದೊಡನೆ ಒಂದುಗೂಡು ! ” ೧೨

# ಸಂಜೆಯೊಂದು

ನಡುಬೇಸಗೆಯ ಸಂಜೆಯೊಂದು.
ಹಗಲೆಲ್ಲ ಸೂರ್ಯ ನಿರ್ದಯನಾಗಿ ತೂರಿರುವ
ಬಿಸಿಲೆಂಬ ಹೆಸರುರಿಗೆ ತಲೆಕಾದ ನೆಲವನ್ನು
ಸಂತವಿಸೆ ಗಾಳಿ ಬೀಸುತಿದೆ. ೧

ಮೆಲ್ಲಮೆಲ್ಲನೆ ಮಬ್ಬುಕವಿಯೆ
ವೇಗವೇಗದಿ ನಾನು ತಿರುಗಲಿಕೆ ನಡೆದಿಹೆನು
ಏನೊ ಯೋಚನೆಯಲ್ಲಿ ಏನೊ ಧ್ಯಾನದಿ ತೊಡಗಿ
ದೊರೆಯುದೊಡನೆಗೆ ಕೈಯ ಚಾಚಿ. ೨

ಕೆಳಗೆ ಮೋರೆಯ ಹಾಕಿ ನಡೆದೆ.
ಒಳಗೆ ಯೋಚನೆ ನೂರು, ಗಾಳಿ ತಿನ್ನಲು ಬಂದ
ನನ್ನ ತಲೆ ತಿನ್ನುತಿವೆ, ಬೇಡವೆಂದರೆ ಕಾಡಿ
ಜೀವ ಬೇಡೆನಿಪ ಮಕ್ಕಳಂತೆ. ೩

ಸುಳಿಗಾಳಿ ಕೊಳೆಗೂಡಿ ಬಂತು,
ಗಾಳಿಯೋ ದಿನದಿನದ ಉಣಿಸಾದ ನಾಡುಗಳ
ಉಸಿರುಗಾಳಿಯು ಹತ್ತುದಿಶೆಯಲ್ಲಿ ಸುತ್ತರಿದು
ಹತ್ತಿರಕೆ ಬಂತೇ ಎಂಬುವೊಲು. ೪

ಭೂಮಿಯಾಗಿದೆ ಭವ್ಯಮಸಣ!
ಹಸಿವು ಹಾಹಾಕಾರ, ಇದ್ದು ಇಲ್ಲದ ಬರವು
ಯುದ್ಧವಾರಿಗೆ ನಿತ್ಯ ನೆತ್ತರಿನ ಔತಣವು
ಮನುಜ ಸ್ವಾರ್ಥದ ದಿವ್ಯ ದೃಶ್ಯ! ೫

ಏನಿದೇನಿದು ನಿತ್ಯ ಸಾವು !
ಸಾವೆ ನಿತ್ಯವೆ ? ನಾವು ಇರುವುದಕೆ ಬೆಲೆಯೇನು ?
ಬೇಸರಿಲ್ಲದೆ ಮೂಕಸೃಷ್ಟಿ ತಾ ನೂಕುತಿದೆ
ನಮ್ಮ ಬೇಸರ ಹೆಚ್ಚುಗೊಳಿಸಿ. ೬

ಈ ತರದ ಯೋಚನೆಯಲಿದ್ದೆ.
ಅತಿಯಾದ ಯೋಚನೆಯ ಬಗೆಬಲೆಯ ಹೆಣೆಯಿಂದ
ಬಿಡುಗಡೆಯ ಹಾರೈಸಿ ಹಕ್ಕಿಹಗುರಾಗಲಿಕೆ
ನೋಡಿದೆನು ನನ್ನಿದಿರ ಮುಗಿಲ. ೭

ಕಂಡೆನೊಮ್ಮೆಲೆ ತುಂಡು ಬೆಳಕು !
ಬಿದಿಗೆ ಚಂದಿರನಲ್ಲಿ ಮೂಡಿ ಮೆರೆಯುತಲಿಹನು
ಕಾಣದಾನೆಯ ಕೋರೆಹಲ್ಲೊಂದೆ ಆಗಸದಿ
ಅಚ್ಚೊತ್ತಿದೊಲು ನಿಲ್ಲುವಂತೆ. ೮

ಚೆಲುವಿಗೊಲಿಯುವ ಹೃದಯವರಳೆ,
ನೋಡಿದೆನು ತಿರುತಿರುಗಿ ನೋಡಿದೆನು ಸೋಜಿಗದಿ
ಹಿಂದೆ ಕಂಡರು ಮತ್ತೆ ಕಾಂಬ ಹೊಸ ಹಂಬಲದಿ
ಚೆಲುವ ನಿತ್ಯತೆಗೆ ಮರುಳಾಗಿ. ೯

ಇನಿತರಲಿ ಕೇಳಿಸಿತು ಹಾಡು —
ಮೈಚಳಿಯ ತೊರೆದು ತಾನೇರೇರು ಧನಿಯಲ್ಲಿ
ಲಾವಣಿಯ ಲಾವಣ್ಯ ಸುರಿಯುತಿಹ ಹಳ್ಳಿಗನು
ಗಾಡಿಹೊಡೆಯುತ ಹಾಡುತಿಹುದು. ೧೦

ಏನು ಸೊಗಸಾ ಸಹಜಗಾನ !
ಕೇಳಿದೆನು ಕಿವಿದುಂಬ ಕೇಳಿದೆನು ಮೈಮರೆತು
ಮೇಲೆ ಮುಗಿಲಿನ ಚೆಲುವು, ಕೆಳಗೆ ಮನುಜನ ನಲಿವು
ಏಕತಾನವೆ ಆಗಿ ತೋರಿ. ೧೧

ಕಲ್ಪನೆಯು ರೆಕ್ಕೆಯನು ಬೀಸೆ,
ಯುಗಯುಗದ ಆಗು ಹೋಗುಗಳಲ್ಲಿ ತೋರಿತಕೊ
ವಿಶ್ವಪುರುಷನ ನಿತ್ಯನಿರ್ಝರಣ ಸ್ವರೂಪವು
ಕಂಡ ಕಣ್ಣಿಗೆ ನಿಚ್ಚಳಾಗಿ. ೧೨

ಬೀದಿಯಲಿ ಬೆರಗಾಗಿ ನಿಂದೆ.
ವರುಷಗಳು ಸಂದಾವು, ತರತರವ ತಂದಾವು
ಆ ಚೆಲುವನೀನಲಿವನೆದೆಯಲುಕ್ಕುವ ಒಲವ
ಕಳೆಯುವವೆ ಕಸಿಯುವವೆ ಎಂದೆ. ೧೩

ಬೇರೆ ಯೋಚನೆ ಸಾರಿ ಬಂದುವು.
ಸಾವು ಇದೆ ಆದರೂ ಸಾವಿಗೂ ಸಾವುಂಟು,
ನಿತ್ಯಕ್ಕೆ ಸಾವಿಲ್ಲ, ಸಾವೆ ಸಾರುತಲಿಹುದು
ಸಾವಲ್ಲದೊಂದು ಉಂಟೆಂದು. ೧೪

ನಮಗೆಂದು ತಿಳಿವುದೀ ಮಾತು ?
ನಮ್ಮ ಸಾವಿಗೆ ನಮ್ಮ ನೋವಿಗೂ ನಾವು ಹೊಣೆ,
ಮರವೆಯೋ ಮಾಮರಣ, ಅರಿವುಳ್ಳ ಇರುವಿಕೆಯೆ
ಅಮರತೆಯ ಪಥದಿ ಮುಂದಡಿಯು. ೧೫

# ದೂರದ ಗುಡುಗು

ಅಕೊ ಕೇಳುತಿದೆ ದೂರದೂರದಲಿ ಗುಡುಗು.
ತಡೆತಡೆದು ಮಿಡಿಯುತಿಹ ಮುಗಿಲೆದೆಯ ನಡುಗು.
ನೆತ್ತಿಯಲಿ ಮೇಲೆ ನೀಲದಪಾರ ಚೆಲುವು
ಅಲ್ಲಿ ಮೆಲ್ಲನೆ ಸುಳಿವ ತಿಂಗಳನ ನಲಿವು.
ನೆಳಲಾಟವಾಡುತಲಿ ಬೆಳುದಿಂಗಳಿಹುದು
ಜಗದ ಜಂಜಡವಳಿದು ಜೀವ ನಲಿದಿಹುದು.
ಆದರೂ ಕೇಳುತಿದೆ ದೂರದಲಿ ಗುಡುಗು
ಇಂದಿನೊಸಗೆಗೆ ಮುಳುವು ಮುಂದಿನಾ ನಡುಗು.

# ಮುಗಿಲರಸವಂತಿ

ಮುಗಿಲರಸವಂತಿಯೊಲಿದಳು ಇಂದು ಕಾದು ಕಲ-
ಮಲಗೊಂಡ ನೆಲದ ಕವಿಗೆ
ಇಳೆಯೆಲ್ಲ ತುಂಬಿತುಳುಕಾಡಿತ್ತು ಒತ್ತರಿಪ
ಮುತ್ತುಮಳೆ ಒಗ್ಗುಸರಿಗೆ. ೧

ಹೆಚ್ಚುತಿಹ ಬೇಸಗೆಯು ಕಿಚ್ಚಿನಲಿ ಬೆಂಡಾಗಿ
ಬಾಯಾರಿ ಜೀವವೆಲ್ಲ
ಹುರಿಮಳಲಿನಲಿ ಸುರಿದ ಕಾಳಿನೊಲು
ಕಾಳಾಗಿ ಬದುಕಿರಲು ನುಡಿಯೆ ಸಲ್ಲ. ೨

ತಂಪುತಣ್ಣಸಬೇಡಿ ನೆಳಲಿನಾಸರ ಹೊಂದಿ
ಹಾಯೆಂದು ಬಿಸುಸುಯ್ಯುತ
ಬಿಸುಪನುರಿಗಾಳಿಯುಲಿ ಬೆರಸಿ ಹುರಿಹುರಿದಾಗಿ
ಜನವಿರಲು ಎದೆಬೆಯ್ಯುತ. ೩

ಆಗೊಮ್ಮೆ ಈಗೊಮ್ಮೆ ಹಲವು ಹಗಲಿರುಳಿನಲಿ
ಮೋಡಕೂಡುತ ತೋರಿರೆ
ತಂಗಾಳಿತೀಟದಲಿ ಮಳೆಯು ತುಸುಹನಿಚೆಲ್ಲಿ
ಮಾಯವಾಗುತ ಸಾರಿರೆ. ೪

ಬಗೆಯುಗವಿಗತ್ತಲೆಯ ಕಳೆವ ಹೊಳಪಿನ ಹಾಗೆ
ಬೂದಿನೀಲಿಯ ಮುಗಿಲನು
ಹಲವು ಬಗೆ ಹೊಗರಿನಲಿ ಬೆಳಗಿಸುತ ಮೂಡಿ ಮರೆ-
ಯಾಗಿತ್ತು ಮಿಂಚು ತಾನು. ೫

ಇದೊ ಬಂತು ಮಳೆಯೆಂಬ ಮುರುಳಾಗಿ ಕೊನರಿಸುತ
ಬಾನೆಲ್ಲ ಮೋಡ ಕವಿಯೆ
ತಂಗಾಳಿಯನು ತಬ್ಬಿ ಜೀವಶಿಶು ಕೂಗಾಡು-
ವನಿತರಲಿ ಬಾನು ತಿಳಿಯೆ ೬

ಇಂತಿರಲು ಇಂದು ಬಂದಿತು ಎಂತೊ ಗಾಳಿ ತಂ-
ಪನು ಮುಂತೆ ಸೂಸಿ ಸೂಸಿ
ಬೇಡಿ ಕಾಡಿದ ಬಾನ ಗೋವುಗಳ ಮೊಲೆಹಾಲು
ಸುರಿಸಿರುವ ಅಮೃತರಾಶಿ ! ೭

ಬರಿ ಬಾಯ್ತೆರದ ನೆಲ ನೀರುಂಡು ತಣಿವಿಕೆರೆ-
ಯಲಿಯೀಸುವಂತಾಯಿತೊ
ತರಗೆಲೆಯು ತಿಂತಿಣಿಯು ತಿರೆಸೇರಿ ಹೊಸಹಸುರು-
ಮೊಳೆಗೆ ಗೊಬ್ಬರವಾಯಿತೊ. ೮

ಸಕ್ಕ್ಯಹಾರಿಕೆಯೇನು ! ಮಿಂದು ಮೈತೊಳೆದಿಲ್ಲ
ಗಿಡಬಳ್ಳಿ ಚೆಲ್ಲವೇನು !
ಹೊಚ್ಚಹೊಸತನವನೂದಿ ಚೇತನವ ಚಿಮ್ಮಿಸುವ
ತಣ್ಣೆಲರ ಸೊಲ್ಲದೇನು ! ೯

ಬರುವಂದು ಬಾ ತಾಯೆ ಮುಗಿಲ ರಸವಂತಿ ನೀ
ನಿಯಮನಿರ್ಬಂಧರಹಿತೆ !
ಬಂದಾಗಲಿಂತೆಲ್ಲ ಸೃಷ್ಟಿಯೊಳಹೊರಗುಗಳ
ತೊಳೆದು ಹೊಳೆಯಮೃತಸಹಿತೆ ! ೧೦

# ಬೇಸಗೆಯ ಮೊದಲಮಳೆ

ಬಿರುಬಿಸಿಲ ಬಸಿರಿಂದ
ಒಗೆತಂದ ತಂಪನಿಯ ಸೋನೆ !
ಹಿರಿದುಕ್ಕದೊಡಲಿಂದ
ಹೊರಬಂದ ಸುಖದ ಸವಿಜೇನೆ !

ಒಮ್ಮಿದೊಮ್ಮೆಯೆ ರವಿಯು
ಬೇಸಗೆಯ ಉರಿಗದಿರ ಚಾಚಿ
ತಿವಿಯುತಿರೆ ತೋರಿತದು
ಪ್ರಳಯಕಾಲಕೆ ಕಿರಿಯ ಸೂಚಿ ೧

ನೆಲಕಾದು ಬಾಯ್ತೆರದು
ಹುರಿಮುಳಲಿನಂತಾಗಿ ತಪಿಸೆ
ಜೀವಜಾತವಿದೆಲ್ಲ
ಬೆಂಕಿಬಾಳಿದುವೆಂದು ಶಪಿಸೆ ೨

ಅನ್ನಕಸಿಯುತು ಭೂಮಿ
ನೀರಸೂ ಈ ಬಿಸಿಲು ಹೀರೆ
ಬದುಕೆ ಸಾವಿನ ಮನೆಯು
ಎಂದಾರ್ತ ಜನ ಹಲುಬಿ ಸಾರೆ ೩

ಬೆಳಗೆ ನಡುಹಗಲಾಗಿ
ಹಗಲೆಲ್ಲ ಉರಿಗೆಂಡ ಸುರಿಯೆ
ಯಮನ ಕರಿದೂತರೂ
ಬಿಳಿಕಿರಣವಾದಂತೆ ನೆರೆಯೆ ೪

ಬಿಸಿಲೆ ಜೀವಸಕೆಲ್ಲ
ಮೂಲವೆಂದೊರಲಿ ಜಗ ಮಿಡುಕೆ
ನೆಲದ ರಸವನು ಹೀರಿ
ಮುಗಿಲಿನೆತ್ತರವಗುವೆ ತುಡುಕೆ ೫

ಮೇಘಮಾಲೆಯ ರಚಿಸಿ
ಮಿಂಚುಗೊಂಚಲ ಸನ್ನೆಗೈದು
ತನ್ನ ಬರವಿನ ಕಾಳಿ-
ತಂಗಾಳಿಯನು ಸೂಸಿ ಸುಯ್ದು ೬

ಉಗ್ರವೇಷವ ತೊರೆದು
ತಾಂಡವದಕಾಂಡವನು ಮರೆದು
ಮೃದುಲಲಿತ ಲಾಸ್ಯದಲಿ
ಬಿಸಿಲ ರುದ್ರನು ಬಂದ ಮಣಿದು ೭

ಬೇಸಗೆಯ ಮೊದಲಮಳೆ!
ನಿನ್ನ ಸವಿಯುಂಡಿತೀ ಇಳೆ
ಹನಿಹನಿಯ ತಾನೀಂಟಿ
ಹರಡುತಿದೆ ನರುಗಂಪ ಬೆಳೆ. ೮

ನಿನ್ನಲ್ಲಿ ಮೈನನೆದು
ಮನನನೆದು ಸುಖದ ತೊರೆಯಾಯಿತೊ!
ಉಂಡ ಉರಿಯೆಲ್ಲವೂ
ರಸರೂಪತಾಳಿ ಸಿರಿಯಾಯಿತೊ! ೯

# ಮಳೆತಂದಲು

ಬೇಸಗೆಕೊನೆಯಲಿ ಬಿಸಿಲುರಿಮೊನೆಯಲಿ
ಬಿಸಿಬಿಸಿ ಗಾಳಿಯು ಬೀಸುತಲಿರಲು
ಗೋಳುವ ಬರಿನೆಲ ಭಣಭಣಗುಟ್ಟಿರೆ
ಹಾಳ್ಸುರಿಯುವ ಹೆಣ್ಣನ ಹಣೆಯಾಗಿರೆ
ಮುಗಿಲಲಿ ಒಮ್ಮೆಲೆ ಕಪ್ಪಿನ ನೀಲಿಯ
ಬಗೆಬಗೆ ರೂಪಿನ ಮೋಡಗಳೋಳಿಯ
ಮೊತ್ತದಿ ಆನೆಯ ನೆತ್ತಿಯ ಹಾರದಿ
ಮುತ್ತುಗಳಂದದಿ ಹನಿಹನಿಯೊಡೆಯಲು
ತಂಪಿಂಪಿನ ಮಳೆಗಾಳಿಯು ಬೀಸಲು
ತಂಪನಿಯನು ಬುವಿಮೈಯಲಿ ಸೂಸಲು
ಬಿರಿಯುತ ಬಾಯ್ದೆರೆದಿಹ ನೆಲ ಹೀರಿತು
ಸಂತೋಷದ ಸವಿಗಂಧವ ಬೀರಿತು
ಆರಿದ ನಾಲಿಗೆ ಹೊಸಹನಿ ಸುಧೆಯನು
ಈಂಟಿತು ಬಾಯ್ ಚಪ್ಪರಿಕೆಯ ತೋರಿ.
ಸುರಿವಾ ಮಳೆಗಿಂತಲು ಬರಲಿಹ ಮಳೆ-
ತಂದಲು ಸವಿಯಲಿ ಮಿಗಿಲೋ ಮಿಗಿಲು.



# ಮಳೆಗಾಲದ ಮೊದಲ ಮಳೆ

ಎಲ್ಲ ಕಡೆಗೆ ಒಂದೆಸವನಿ
ಒಂದೆ ಸಮಯ ಸುರಿದಿದೆ
ಮಳೆಗಾಲದ ಮೊದಲ ಮಳೆಯು
ಮುಗಿಲಿ ತಾನು ಹರಿದಿದೆ ೧

ಅಲ್ಲಿ ಇಲ್ಲಿ ನೀರೆ ನೀರು
ಮುಗಿಲ ನೆಳಲ ಮೂಡಿಸಿ
ಬಿಸಿಲ ಬಿರುಬಿನಿಂದ ಬೆಂದ
ನೆಲಕೆ ತಂಪನೂಡಿಸಿ ೨

ಹರುಷದಿಂದ ಎದ್ದು ನವಿರು
ಅಚ್ಚ ಹಸಿರು ತೋರಿದೆ
ತಂಪು ಕಂಪು ಬೆರೆತ ಗಾಳಿ
ಋತುವ ಬರವ ಸಾರಿದೆ. ೩

ಬಿಸಿಲು, ಬೆವರು, ಕೋಪತಾಪ-
ವೆಲ್ಲ ಮಾಯವಾಗಿದೆ.
ಎಲ್ಲ ನೆಲವು ನೀಲಗಿರಿಯು
ತಂಪುಸೊಗದಿ ತೂಗಿದೆ. ೪

ಇನಿತು ಬೇಗ ಎನಿತು ಬದಲು!
ನಿಯತಿಯ ಬಿಸವಂದವು
ಯಾವುದೇನು ಆದರೇನು
ತಲೆದೋರುವ ಚಂದವು. ೫

ಬಿಸಿಲಿನಿಂದ ಉರಿವ ಬಾನು
ಮಳೆಯ ತಾನೆ ಸುರಿವುದು
ಮನುಜ! ನಂಬು ನಿಯತಿಕರುಣೆ
ಸಮಯ ಬರಲು ಹರಿವುದು. ೬



# ಒಂದು ನೋಟ

ಭೂಮಿಯ ತಬ್ಬಿ ಬಂದಿತು ಬಿಸಿಲು
ವ್ಯೋಮದಿ ಹಬ್ಬಿ ನಿಂದಿತು ಮುಗಿಲು.
ಮೊದಲಿನ ಮಳೆಯ ನವರಸದಿಂದ
ಒದವಿದೆ ನೆಲದ ಹಸುರಿನ ಚೆಂದ
ನೋಡಿದ ಕಡೆಗೆ ಎಳಎಳಗರಿಕೆ
ಮೂಡಿವೆ ಕಣ್ಣೊಳು ತುಂಬುತ ತುಳುಕೆ
ಇಂದೇ ಸೃಷ್ಟಿಯ ಮೊದಲಿನದಿನವೊ
ಎಂದೆನಿಸುವುದೀ ಹೊಸಹೊಸತನವೊ
ಕಾಲದ ಮೈಯು ತಿರುತಿರುಗುತಿರೆ
ಹೊಲದ ಸಿರಿಯು ಮರುಮರಳಿ ಬರೆ
ಬರಗಿನ ಭರವು ಒರಗಿಹುದೇನು
ಕರಗುವ ಎದೆಯು ತರುಬಿತೆ ತಾನು ?
ತಾರಿದ ನೆಲಕೆ ಕಾಪಿನ ಮಳೆಯು
ಸಾರಿದ ಒಡನೆ ತೂರಿತು ಕಳೆಯು
ಹರಗಿದರಾರೊ ಬಿತ್ತಿದರಾರೊ
ಹರಡಿದೆ ಮಾತ್ರ ಹುಲ್ಲಿನ ಹಸುರೊ.
ತಣಿಯದು ಇವನು ನೋಡುವ ಕಣ್ಣು
ಕುಣಿಯಿತು ಜೀವ ಪಡೆದಿತು ಹಣ್ಣು
ಕವಿಯುವ ಮೋಡ ಸುರಿಯುವ ಸೋನೆ
ಕೊರೆಯುವ ಚಳಿಯು ತರುವಾ ಬೇನೆ
ತಡೆದೇನಂದಿತು ನೋವಿನ ಪಾಟ
ಪಡೆಯುವುದಾದರೆ ಈ ಸವಿ ನೋಟ
ಏನಿದು ಎಂಥ ಬಣ್ಣದ ಪಸರ
ಬಾನೊಳು ತರತರ ನೀಲಜಲಧರ

ನೆಲದಲಿ ಹಸುರು ವಿಧವಿಧ ಕುಸರು
ಅಲರಿನ ಸಾಲು ಚೆಲುವಿಗೆ ಹೆಸರು
ಎಲ್ಲವನಪ್ಪಿ ಇದೆ ಹೊಂಬಿಸಿಲು
ಚೆಲುವನು ತಿಳಿವು ಕೂಡಿದ ಸುಸಿಲು
ಮರದೆಲೆ, ಮನೆಯು, ಮುಗುದೆಯ ಮೊಗವು
ಅರಚಣವಾಗಿದೆ ಹೊಸಬಗೆ ಬಗವು.



# ಸುಖಸಂಚಾರಿಗಳು

ಎಲ್ಲಿಂದೆಲ್ಲಿಗೆ ಏತಕೆ ಹೇಗೆ
ಎಂಬಾ ಕೇಳಿಕೆ ಕೆರಳಿಸಿ ಮೇಗೆ
ಬಾನಂಗಣದಲಿ ನಾನಾರೂಪದೊಳು
ಸಾಗಿವೆ ಶ್ರಾವಣಸುಖಸಂಚಾರಿಗಳು. ೧

ಮುಮ್ಮಳೆ ಸುರಿದಿಹ ಘಾರತೆಕಾರದ
ಕರುಣೆಗೆ ಬಾಯ್ತೆರೆಯುತ ಬರುನೆಲದ
ಕೆರೆತುಂಬಿರೆ ಕಾಲುವೆ ತುಳುತುಳುಕೆ
ಕಿರಣಕೆ ಕುಣಿಯುತ ತೆರೆ ಥಳುಥಳುಕೆ. ೨

ತಿರೆಯೊಡಲಿನ ಮಾಟದ ಪತ್ರರಾಜಿಯು
ಹೊರದೋರಿತೊ ಎನೆ ಹೊಸಹಸುರಿನ ಹಸಿ
ಹಾಸಿದೆ ' ಬಾ ಚೆಲುವೇ ಒರಗಿಲ್ಲಿ '
ಎಂದೊಲಿಯುತ ಪಿಸುನುಡಿಯಲಿ ಸೊಲ್ಲಿ. ೩

ಬದುಕಿಗೆ ಭರವಸೆನೀಡುವ ತೆರದಲಿ
ಬಿತ್ತಿದ ಬೀಜಕೆ ಹೊಲಹೊಲಗೆರೆಯಲಿ
ಮೊಳಕೆಗಳೇಳುತ ತಿಳಿಯದೆ ಬೆಳೆದಿರೆ
ಪ್ರಕೃತಿಯು ಅಭಯದ ಕಿರುಬೆರಳಾಡಿಸಿರೆ. ೪

ಈ ನೋಟದಿ ತಮ್ಮಾಟವ ನೋಡುತ
ನಲಿಯುತ ತೂಗುತ ನಡೆಯಲಿ ತಡೆಯುತ
ಬಾನಂಚಿನ ಮುಂಚದಿ ಜೊಂಪಿಸಿ ಮರಳಿ
ಏಳುತ ತೆರಳಿವೆ ಆ ಮುಗಿಲಿನ ಓಳಿ. ೫

ಬೆಳಗುಬ್ಬೈಗುಗಳ ಹೊಂಬಿಸಿಲು
ನಿನ್ನ ಮರೆಸುವ ಮಾಯೆಮುಸಿಲು
ಬೆಳದಿಂಗಳಚ್ಚುಕಳಿ ಬರಲು
ಮೈಗೆ ಬಿಸಿಯೆಸೆವ ಬಿರುಬಿಸಿಲು ೫

ನಿನ್ನ ಕಾಣದೆ ಕಂಡ ಚೆಲುವು
ನೀನು ಒಲಿಯದೆ ಇದ್ದ ಒಲವು
ನೀನು ಬಾರದೆ ಬಂದ ಬಲವು
ಕಾಡುಬೆಳದಿಂಗಳಿನ ತೆರವು. ೬



# ಯಾಕೆ?

ತುಂಬಿ ಬಂದ ರಸದ ಜಲದ
ಯಾಕೆ ಮುಂದೆ ಸಾಗಿದೆ?
ಹಂಬಲಿಸುವ ಲೋಕದೆದೆಯ
ತುಂಬಿ ತುಳುಕಿ ಸೂಸದೆ? ೧

ಬಿಸಿಲಿನುಂಡು ಹಸಿಯುದಿಂಗಿ
ನೆಲವು ಬಿರಿತು ಬಲಿತಿರೆ
ಬೆಳೆಯು ಬಳಿಯು ಮೊಗದಿ ಕಂದಿ
ನಿನ್ನ ಕರೆನು ಹಲುಬಿರೆ. ೨

ಬಾರವಾಗಿ ದೂರ ಹೋದೆ
ಎಂದು ತಿಳಿಯ ಬಾನೊಳು
ಹೊಳೆವ ಕಿರಣ ಸಾರುತಿರಲು
ಬಂದೆ ಬಗೆದು ನಿನ್ನೊಳು. ೩

ಬರವದೆಂಥ ದಿವ್ಯರಮ್ಯ!
ಭಸಿತವೇಷಕಾರಿಯೆ!
ಮುಗಿಲನೆಲ್ಲ ಮುತ್ತಿ ಮೆರೆವ
ಅಮೃತರಸದ ಧಾರೆಯೆ!

ಬಿಸಿಲ ಮರೆಸಿ ಮಳೆಯ ತರಿಸಿ
ತಂಪುಗಾಳಿ ತೀಡಿದೆ
ಎಲ್ಲ ಬಳ್ಳಿಮರವ ತೂಗಿ
ಬರುವ ಸುಖವ ಹಾಡಿದೆ. ೪

ಹೃದಯದಾಳದಿಂದ ಹರುಷ
ಚಿಮ್ಮಿದಂತೆ ಹೂಗಳು
ಬಾಲರೊಡನೆ ತೂಗಿ ತೊನೆದು
ಕುಣಿಯುತಿಹವು ಈಗಳು. ೬

ಕೋಟಿಕಣ್ಣು ಆಸೆಕಣ್ಣು
ದೊರೆಯಿತೆಂದು ತೆರೆಯುತ
ಮೇಲೆ ನೋಡಿ ನಲಿಯುತಿಹವು
ಕನಸುಗಂಡು ಬೆರೆಯುತ. ೭

ಮುಸಲಧಾರೆಯಾಗಿ ಸುರಿವೆ
ಎಂದು ಸೂಚಿಪಂತೆಯೆ
ಭರದಿ ಓಡಿಯೆ ಕೆಲಸೇರ್ಗಸಿ
ಸಿಂಪಡಿಸಿರುವಂತೆಯೆ ೮

ನಿನ್ನ ಬರವ ಭವ್ಯತೆಯನು
ಸಾರುತಿರುವ ಮೊಳಗದೊ
ನೆಲಮುಗಿಲನು ನಡುಗಿಸಿಹುದು
ಭಯದೊಳಭಯಸ್ವರವದೊ ೯

ಇಂತಿದೆಲ್ಲ ಗಾಳಿಗುಡಿಯು
ರಚಿಸಿ ಬಂದು ಬಾರದೆ
ಕಣ್ಣಮುಂದೆ ನುಸುಳಿ ನಡೆವೆ
ಯಾಕೆ ತೋರಿ ತೋರದೆ ? ೧೦

ನಿನ್ನ ಕೃಪೆಗೆ ನಾವು ಹೊರತೆ ?
ಏನು ನಮ್ಮ ಕೊರತೆಯು ?
ನಿನ್ನ ಸವಿಯು ಸವಿಯುದಂತೆ
ಬರೆತು ಇಹುದೆ ಒರತೆಯು ? ೧೧

ಏನನುಸುರುತಿಹುದು ನಿನ್ನ
ಗುಡುಗು ಬೆಡಗು ನುಡಿಯುತ ?
ನಿನ್ನ ಪಡೆಯಲರ್ಹರಲ್ಲ
ನಾವು ಎಂದೆ ಸಿಡಿಯುತ ? ೧೨

' ರಸವ ಪಡೆದು ತಿಳಿಯ ತೊಳಸ
ಹಳ್ಳ ತೊರೆಗಳಾಗದೆ
ಸುಲಿತ ಕೊಳಗಳಾಗಿಯುಳಿಯೆ
ಮಾಡಲೇನು ಸಾಗದೆ ? ' ೧೩

ಎಂಬುದಿದೇ ನಿನ್ನ ಸೋಗೆ ?
ಏನು ಹೇಳು ನೀರದ !
ಬರವುಹೋಗು ಬರಿಲಹರಿಯು ?
ಸ್ವೈರಗತಿಯ ನಾರದ ! ೧೪

ಬಂದು ಬೆರೆತು ಎಲ್ಲಿ ಏನೊ
ತೋರಿದಲ್ಲಿ ಸುರಿಯುತ
ಮರೆಗೆ ಸಾರಿ ಇರುವಿರೇನೊ
ಲೀಲೆಯಲ್ಲಿ ನಲಿಯುತ ! ೧೫

# ಸಂಜೆಯಾ ಮುಗಿಲಲ್ಲಿ

ಸಂಜೆಯಾ ಮುಗಿಲಲ್ಲಿ
ಬಣ್ಣನೆಯ ಮೀರಿದಾ
ಬಣ್ಣಗಳ ಮೋಡಿಮನೆ ಕಣ್ಣತುಂಬಿಸುದು.
ಹಣ್ಣಿತೀ ಬದುಕೆಂದು ಜೀವನಂಬಿಸುದು. ೧

ಪಡುವಣದ ದಿಕ್ತಟದಿ
ತುದಿಯಿಂದ ತುದಿವರೆಗೆ
ಕಾದ ಚಿನ್ನದ ರಸವು ಕಡಲಾಗಿ ಹರಿದು
ಬಣ್ಣಗಳು ನೆರೆಯುವವು ಮೇಳದಲಿ ಬೆರೆದು. ೨

ಮುಳುಗುಬೆಟ್ಟದ ಮೇಲೆ
ಇಂದ್ರಲೋಕದ ನಾಟ್ಯ-
ಮಂದಿರವೆ ಇಳಿದಂತೆ ತೋರುತಿದೆ ತೊಳಗಿ
ಎಂದಿಗೂ ಹೀಗಿರಲಿ ಎಂಬಾಸೆ ಬೆಳಗಿ. ೩

ನೋಡಲ್ಲಿ ತೆಂಕಣದಿ
ಕೂಡಿ ಬಹ ಮೋಡಗಳು
ಎಂಥ ನೀಲಿಯ ಹಸರಹೆಂಪು ತಾಳಿಹವು!
ಒಂದರಂತೊಂದಿಲ್ಲ ತರತರದ ನಿಲವು! ೪

ಅಂತರಿಕ್ಷದ ಪಟದಿ
ಅಂತವಿಲ್ಲದಚಿಂತ್ಯ
ವರ್ಣಗಳ ಚಿತ್ರಗಳ ಬರೆಯುತಿಹ ಚದುರ!
ಕಂಡರೂ ಕಾಣದೊಲು ಕ್ರೀಡಿಸುವ ಮಧುರ! ೫

ಅರೆಬರೆದ ಮಸಿಬೆರೆತ
ಚಿತ್ರವಿದು ನೆಲದಿರವು
ಹಾಳ್ಸುರಿಯುತಿದೆ ಮಾನವನ ಮಾಟದಿಂದ
ತುಂಬಿ ತೋರುವುದೆಂದು ನಿನ್ನಾಟದಿಂದ ? ೬

ಪೂರ್ಣ ಪರಿಣತ ಶಿಲ್ಪಿ !
ಮುಗಿಯಿಲ್ಲದಾಟಿಗನೆ !
ಮುಗಿಲ ಬರೆಪವಿ ನಿನ್ನ ತುಂಬುಕತೆ ಕಂಡು
ಸೊಗಪಡೆವೆ ಬರಲಿರುವ ಅನುರತೆಯನುಂಡು. ೭



# ಹೊಂಬಿಸಿಲು

ಚಿಮ್ಮಿತೊಮ್ಮೆಲೆ ನೋಡು
ದಿನಮಣಿಯು ಮುಳುಗುವಾ ದಿಕ್ಕಿಂದ
ಹೊಂಬಿಸಿಲ ಹೊಳೆ ಹೊಳೆದು
ತುಂಬಿ ಹರಿಯುತ ನೆಲದ ಮೇಲುಕ್ಕಂದ! ೧

ತೆಳುಸೀಲ ಕರಿಬಿಳಿಯ
ಮೋಡಗಳು ಮುಸುಕಿರಲು ಸೂರ್ಯನನು
ಮಂದಗತ್ತಲೆ ತೆರೆಯ
ಬಂತು ಭೇದಿಸಿ ಹೊನ್ನಬಿಸಿಲ ಹಸನು. ೨

ಎತ್ತಕಡೆ ಬಿತ್ತಿತೋ
ಎಂಥ ಬೆರಗಿನ ಬೀಜವೀ ಬಿಸಿಲು!
ನೆಲದಲ್ಲಿ ನೆಲಸಿಹುದೊ
ಹರುಷಕೇಕೆಯು ನಾಕ ಹೊರಸೂಸಲು! ೩

ಚಣದಲ್ಲಿ ಕಣಕಣವು
ಹೊನ್ನಕಣೆಯಾಯಿತೋ ತೊಳತೊಳಗಿ
ಮನೆ, ಬಯಲು, ಮರದುದಿಯು
ಹುಚ್ಚುಹಿಡಿಸುವ ಹಳದಿಯಲ್ಲಿ ಮುಳುಗಿ. ೪

ಗೋಧೂಳಿ ಲಗ್ನದಲಿ
ಸುರಿಗೆಯೆರೆಯುಲು ತಿರೆಯ ಕನ್ನಿಕೆಗೆ
ಅರಿಷಿಣವ ತೊಡೆದಂತೆ
ತೋರುತಿದೆ ಹುಚ್ಚಿದ್ದ ಕಲ್ಪಕತೆಗೆ. ೫

ನೋಡಲ್ಲಿ ಎತ್ತರದಿ
ಗಗನಮಲ್ಲಿಗೆಮರದ ತುದಿಗಿಹವು
ಬಿಳಿಬಿಳಿಯ ಹೂಗೊಂಡೆ
ಹೊನ್ನಗಿವಿದೊಡವಾಗಿ ತೂಗುತಿಹವು. ೬

ಚೆಲುವೆಯಾ ಮೊಗ ಹೊನ್ನು
ಮೈ ಹೊನ್ನು ದಿವ್ಯರೂಪದ ಚೆನ್ನು
ಸಪ್ಪೆಮೊಗದಲ್ಲಿಯೂ
ಸೋತ ಮೈಯಲ್ಲಿಯೂ ಅದುವೆ ಹೊನ್ನು. ೭

ಒಂದೆ ಚೆಲುವೊಂದೆ ನಲಿ-
ವೊಂದಿಹುದು ನೆಲಮುಗಿಲುಗಳನಪ್ಪಿ
ಒಂದು ಚಣ ಮರೆಸಿಹುದು
ದಂದುಗನ ಜಂಜಡವ ಜರೆಯುತೊಪ್ಪಿ. ೮

ಮೋಸಗೊಳಿಸಲು ನಮ್ಮ
ಮೇಲೆ ಬೀಸಿರುವಿಂದ್ರಜಾಲವಿದೊ
ಸಂತವಿಸೆ ಚಿಂತೆಯನು
ಸುಳಿಯಿಸಿದ ಗಂಧರ್ವಪುರಿಯಿಪ್ಪುದೊ ? ೯

ಮುಳುಗುದಿಕ್ಕಿನ ಕಡೆಗೆ
ಇಳಿದು ಹೋಗುವ ಮುನ್ನ ಮಿತ್ರರವಿಯು
ಎಲ್ಲರಿಗೆ ಹೊನ್ನೀವೆ-
ನೆಂದು ನೀಡಿದ ಹೊನ್ನಬಿಸಿಲ ಸವಿಯು ? ೧೦

ಹೊಳೆದು ಮರೆಯಾದರೂ
ಮಟಮಾಯವಾದರೂ ಬೆಳಗುತಿರಲಿ !
ಇಂತಿರಲು ಮಾಯೆಯದ-
ನಂತಕಾಲದವರೆಗೆ ತೊಳಗುತಿರಲಿ ! ೧೧

# ಋತುಸಂಧಿ

ಋತುಮಾನದವಿರತ ನಿಯತ ಯಾತ್ರೆಯಲ್ಲಿ
ಗತಿಸಲಿದೆ ಮಳೆಗಾಲ ಚೆಲುವುಗಳ ಚೆಲ್ಲಿ
ಬೆವರು ಹರಿಸುವ ಬಿಸಿಲು ನೆಲವ ತಿವಿಯುತಿರೆ
ಮರವಟ್ಟ ನರನಂತೆ ಗಾಳಿ ತಡೆಯುತಿರೆ
ಸುರಿದು ದಣಿದಿಹ ಮೋಡ ಮುಗಿಲ ಮುತ್ತುವವು
ಕರೆದ ಗೋವಿನ ಮೊಲೆಯವೊಲು ಮಿಸುಕುತಿಹವು.
ಸಂಜೆ ಬರುವುದು ಹೊನ್ನ ಹೂಬಿಸಿಲ ಹಾಸಿ
ಮನೆ ಮೇಲೆ ಮನದೊಳಗೆ ಮೋಹನವ ಬೀಸಿ
ಬಸಿತಬಣ್ಣದ ಮೋಡದರಮನೆಯ ತೆರೆದು
ಕೆಳಗಿಳಿವ ನೇಸರನು ಬಂಗಾರ ಬರೆದು
ನಶ್ವರಕೆ ಅದುಭುತದ ಐಸಿರಿಯ ನೀಡಿ
ಕಣ್ಣ ಮರೆಯಾದನವ ಹೊಂಗಳೆಯ ಕೂಡಿ.
ನಸುಗತ್ತಲೆಯ ಮುಸುಕು ಮೈಯನಡರೆ
ತುಸುತುಸುವೆ ಚಳಿಗಾಳಿ ಮಿದುವಾಗಿ ನಾರೆ
ಬೆಳೆದ ತೆನೆಪೇಟೆಗಳ ತೊನೆದು ತೂಗಿಸಲು
ಮರಡಲೆಯು ಮರವೆಯಿಂದೆಚ್ಚರಿಸಿ ಬರಲು
ಮೇಲಲ್ಲಿ ಮಳೆಮುಗಿಲು, ಕುಳಿರ್ಗಾಳಿ ಕೆಳಗೆ
ಋತುಸಂಧಿಯನು ತಂದಿಹವು ಸಂಜೆಯೊಳಗೆ
ಕಣ್ದೆರೆದು ಬೆರಗಾಗಿ ನೋಡುತಿಹ ಮನುಜ
ಕಣ್ದೆರೆಯೆ ತನ್ನೊಳಗು ಇದೆ ಸಂಧಿ ಸಹಜ
ಜೀವಜೀವಕು ನಿಯತ ಋತುಮಾನವಿಹುದು
ತಿಳಿಯದಲೆ ತಡೆಯದಲೆ ತಾನೆ ಸಾಗಿಹುದು
ಋತುವೊಂದು ಗತಿಸಿರಲು, ಬರುತಿರಲು ಹೊಸದು
ಸಂಧಿಸಮಯದ ತಿಳಿವ ತಳೆದಿಹುದು ಒಸೆದು.

# ಭಾರತದ ಹಿರಿಹುಣ್ಣಿವೆ

‘ ಆನಂದದಿಂದೆಲ್ಲ ಸಂಸಾರ ಹುಟ್ಟಿ ತಾ-
ನಾನಂದದಿಂದಲೇ ಬದುಕಿ ಬೆಳೆದು
ಆನಂದದಲ್ಲಿಯೇ ಸೇರಿಯೊಂದಾಗುವುದು
ಆನಂದವೇ ಬ್ರಹ್ಮವೆಂದು ತಿಳಿದು ’ ೧

ಸಚ್ಚಿದಾನಂದಘನ ಸತ್ಯಶಿವಸುಂದರನ
ವಿಶ್ವಲೀಲೆಯ ಭವ್ಯನಾಟ್ಯದಲ್ಲಿ
ಆನಂದಮಯರಾಗಿ ಬೆರೆತು ಹೆಜ್ಜೆಯನಿಕ್ಕಿ
ಬಾಳುವುದೆ ಯುಕುತಿಯದೆ ಮುಕುತಿ ಇಲ್ಲಿ. ೨

ಮಾಘಮಾಸದ ಭೋಗ ಮಾಗಿ ಬಂದೋಲು ಇಂದು
ಬಂದಿಹುದು ಭಾರತದ ಹಿರಿಹುಣ್ಣಿವೆ
ನೆಲಮುಗಿಲನಪ್ಪಿಹಳು ಬೆಳ್ಳ ಬೆಳ್ದಿಂಗಳಿನ
ನವಮೋಹಿನಿಯು ವಿಶ್ವರೂಪೆ ಚೆಲುವೆ. ೩

ಗಗನಪುಷ್ಪವು ನಿಜದ ನಾಡಿನಲಿ ಇಳಿದಂತೆ
ಬಿದಿಗೆ ತದಿಗೆಯ ಮೊಗ್ಗೆಯರಳಿದಂತೆ
ಪೂರ್ಣಚಂದ್ರನು ಮೆರೆವ ಪೂರ್ಣತೆಯ ಕುರುಹಾಗಿ
ನೋಳ್ಪಕಣ್ಗಳ ಕಡಲು ಉಕ್ಕುವಂತೆ. ೪

ನೀಲ ಕಾವಣದಲ್ಲಿ ಮೂಡಣದಿ ಮೇಲೇರಿ
ತಿಂಗಳನು ಕಿರಣಮಾಯೆಯ ಬೀರಿರೆ
ಬೆಳಕುಸೊದೆಯಲಿ ಮಿಂದು ತಮ್ಮರಿವ ಮರೆತೊಮ್ಮೆ
ಮರೆಯಾಗಿಹವು ತಾವೆ ಹಲವು ತಾರೆ. ೫

ಬಿಳಿನೀಲ ತಿಳಿಬಾನಿನಂಗಣದ ಹರಹಿನಲಿ
ಕಿರಿಮುಗಿಲು ಕಾಣದಾ ಹಸನದೇನು
ಬಾರವೇ ರೆಕ್ಕೆ ಈ ಜೀವಕ್ಕೆ ಹಾರುವೆನು
ನಾನಲ್ಲಿ ಎಂದೆನಿಪ ಕನಸದೇನು! ೬

ಅಂತರಿಕ್ಷದ ಆಚೆಯಿಹನಂತ ಜ್ಯೋತಿಯನು
ಮರೆಗೈದ ಚಂದ್ರಿಕೆಯ ಪಟದ ಮೇಲೆ
ಹೆಣೆದ ಹೂಕುಸುರಿನೊಲು ಕಾಣುತಿದೆ ಅಲ್ಲಲ್ಲಿ
ಮಿಣುಕುತಿಹ ಚಿಕ್ಕಚಿಲು ಚಿಕ್ಕೆಸಾಲೆ. ೭

ಸದ್ದಿರದ ಸರಿರಾತ್ರಿಯೇರುತಿಹ ನೆಲದಲ್ಲಿ
ಜೊನ್ನ ಹಡದಿಯು ಹರಡಿ ಹಾಸಿರುವುದು
ಮೈಚಳಿಯ ತೊರೆದು ಸವಿತಂಪು ಹೂಗಂಪು ಹೇರಿ
ಗಾಳಿಗನ್ನೆಯು ಬಹಳು ಸುಳಿದು ಸುಳಿದು. ೮

ಬೆಳುದಿಂಗಳಿನ ಹೊನಲು ಕಲ್ಪನೆಯ ಕುಡಿಯಲ್ಲ
ಕಲ್ಪಲತೆಯಿತ್ತ ನಿಜನಾಕವೆಂದು
ಬಾಯ್ತೆರೆದು ಕುಡಿಯುವುದು ಮೈಚಾಚಿ ಈಸುವುದು
ಹುಚ್ಚಿದ್ದ ಕವಿಜೀವ ಹಂಬಲಿಸುತಿಂದು ೯

ಮರಮರದ ಮೇಲ್ಬದಿಗಳಾ ಹೊಗರನುಂಡುಂಡು
ಎಲೆಎಲೆಯು ಪ್ರಣತಿಯಲಿ ಬೆಳಕುಕುಡಿಯು
ರತ್ನಪುಂಜವ ತೋರಿ ಸೌಂದರ್ಯದೇವನಿಗೆ
ಬೆಳಗುತಿವೆ ಆರದಾರತಿಯ ಸಿರಿಯು. ೧೦

ಬೆಳದಿಂಗಳೇರುತಿರೆ ಗಿಡಮರದ ತಳದಲ್ಲಿ
ಕರಿನೆರಳು ಇಟ್ಟಣಿಸಿ ಕಾಣುತಿಹುದು
ಹಿಂದೆ ಮುತ್ತಿದ ಹಿರಿಯ ಕತ್ತಲೆಯ ಕಾವಳವ
ಕಾಲಲ್ಲಿ ಬೆಳಕು ತುಳಿದಂತೆಯಿಹುದು. ೧೧

ತುದಿಮೊದಲನರಿಯದಾ ಬೆಳ್ಳಿಗಡಲಿನ ನಡುವೆ
ಬೆಳಕುಂಡ ಬೊಂಬೆಯೊಲು ಬೆರಗುಹೊಂದಿ
ಇನ್ನೇನು ಬೇಡದಲೆ ಬಯಸದಲೆ ಮೈಮರೆತು
ನಾ ನಿಂತೆ ನನ್ನತನವೆಲ್ಲ ನಂದಿ. ೧೨



# ಓ ಸುಂದರ

ಓ ಸುಂದರ! ಓ ಸುಂದರ!
ಬುವಿಬಾನ್ಗಳ ಮಹಾಮಂದಿರ
ಬೆಳಗುತಿರುವನಕೊ ಬಂಧುರ
ಪೂರ್ಣ ಪೂರ್ಣಿಮಾ ಚಂದಿರ!

ತನ್ನ ತಂಪು ಬೆಳ್ದಿಂಗಳನ
ಕೈಬೀಸುತ ನೀಲನಭವ
ತೊಳೆದು ಹೊಳೆದು ತಾನೆತ್ತಾನು
ಬಾಂದೊರೆಯೊಳು ನಲಿವ ಸುಳಿವ. ೧

ದೊರೆಯು ಮುಂದೆ ಹಿಂಬಾಲಿಪ
ಮುಗುದೆಯರಾ ಮೇಳದಂತೆ
ಸರಿಯೆ ತಾರೆ, ಕೆಲವೆ ಧೀರೆ
ಮು ದೋಳಿನೆ ಇಣಿಕುವಂತೆ. ೨

ಎಲ್ಲೆಲ್ಲಿಯು ಶಾಂತಿಯಾಳೆ
ಬೆಳುದಿಂಗಳ ಬೆಳ್ಗೊಡೆಯಲಿ
ತಂಗಾಳಿಯು ಚೌರಿಬೀಸೆ
ಜೀವ ಕುವರ ಪವಡಿಸಿಹುದು. ೩

ಕುಂದುಕಲೆಯು ಮೀರಿ ಹರಿವ
ದುಂಡು ಮೊಗದ ಬಿಳಿಯ ಕಳೆಯು
ತಡೆಯಬಾರದಂಥ ಭಾವ-
ವಾಹಿನಿಯೊಳು ಸೂಸುಕೊಳೆಯು. ೪

ಕರಿಮೋಡದ ಮರೆಯೊಳವಿತು
ಮರಳಿ ಮುಸುಳಿ ಝಗ್ಗೆನ್ನುತ
ಹಿಂಜಿದರಳೆಯಂತೆ ಮುಗಿಲ
ಹರಡಿಯಾಡುತಿರುವನೀತ. ೫

ಕಾಲಹಾದಿಯಿಂದ ಬಂದು
ಆಕಾಶದಿ ನಿಂದ ನಲಿವು
ಬುವಿಯಿರುಳನು ಮನದಿರುಳನು
ಬೆಳಗುತಿಹುದು ಸಲಸಲವು. ೬

ಕರುಣಾಪದಿ ಚೆಲುನೋಟದಿ
ಕಾದಲರನು ಮರುಳುಗೊಳಿಸಿ
ಬೇಟದಲ್ಲಿ ಬೆರಸಿ ಹಿಂದೆ
ಬಾಳತೇರ ಮುಂದೆ ನಡೆಸಿ.— ೭

ಇಂದು ಬೆಳಗುತಿರುವನೆಲ್ಲಿ?
ಗುಂಡುಸಿಡಿದು ಕೆಡೆದ ನಗರ
ಒಡೆದ ಎದೆಯು ಹಸಿದ ಒಡಲ
ಕೋಟಿಜನದ ಈ ಆಗರ. ೮

ನರಳುತಿರುವ ಹೊರಳುತಿರುವ
ಬುವಿಯ ಮೈಗೆ ಬೆಳುದಿಂಗಳ-
ನೀ ಸಿಂಗರ ಮುದ್ದಾಟವು
ತಾಳದಂಥ ಮಾ ತಳಮಳ! ೯

ಓ ತಿಂಗಳ! ನೀ ಮಂಗಳ
ಅಜೇಯ ಆನಂದವಾಗಿ
ಕೋಟಲೆಗಳ ಕೋಟೆಯೊಡೆದು
ಬಾರೊ ಹೊಸತು ಚೆಂದವಾಗಿ. ೧೦

# ತಾರೆಗಳು

ಕಾರಿರುಳ ಕಾವಳದಿ ನೆಲವೆಲ್ಲ ಮುಳುಗಿರಲು
ತಾರೆಗಳ ತಿಂತಿಣಿಯು ನಭದಲ್ಲಿ ಮುಕುರಿರಲು
ಬೇಸಗೆಯ ಕಾದಿಯಲ್ಲಿ ಬಸವಳಿದು ಸುಯ್ಗರೆದು
ಎಳ್ಳನಿತು ಮಿಡುಕದಿಹ ಗಾಳಿಯನು ಕರೆಕರೆದು
ಮೈತೆರೆದು ಮನತೆರೆದು ಮೇಲೆ ನೋಟವ ಬೀರಿ
ಆಗಸದ ಕಾವಣದಿ ಕಣ್ಣೋಡಿಯೊಡಸಾರಿ
ಸುತ್ತೆಲ್ಲ ಅಲೆದಾಡಿ ಜೀವ ಕಂಡಿತು ಘನವ
ಹಿಗ್ಗಿ ಹಗುರಾಗುತಲಿ ಹೀಗೆ ಕೂಗಿತು ಪರಮ :
" ಬಾನ ಕಂಗಳ ಕೋಟಿ ಕಳಿಗಳನು ಕಾಣಲಿಕೆ
ಕಿರಿಮೈಯ ಬರಿಗಣ್ಣು ಸಾಲವಿವು ಸಾಲಿಪದಕೆ
ಅನಂತದ ನಿತ್ಯಚಿತ್ರವನಿಲ್ಲಿ ಬರೆದವನೆ !
ನೋಡಿ ನಲಿಯಲು ನೀಡು ಅನಂತದ ನೋಟವನೆ."



# ಮರದುದಿಯ ಕೋಗಿಲೆ

ಮರದುದಿಯ ಕೋಗಿಲೇ ! ಸ್ವರಮಧುರ ಕೋಗಿಲೆ !
ಇಂದೆನಾ ಕಣ್ತುಂಬ ಕಂಡೆ ನಿನ್ನೀಗಲೆ.

ಬಾಲ್ಯದಿಂದಲಿ ದೂರ ಮರಮರದ ಎದೆಯಿಂದ
ತೇಲಿ ಬರುತಿಹ ನಿನ್ನ ಸವಿದನಿಯ ಸರ ಕೇಳಿ
ಮೈಮರೆತು ನಿಲ್ಲುತಲಿ ಮರುದನಿಯನೀಯುತಲಿ
ಅಣಕಾಟದಲಿ ನಲಿದು ನೀನೆಲ್ಲಿ ಎಂದರಸಿದೆ. ೧

ದಣಿಯದಲೆ ದನಿಗೆ ಮರುದನಿಗೊಡುತ ನೀನಾಗ
ತೆರೆಮರೆಯ ಚೆಲುವಿನೊಲು ಮೈಯಿರದ ಇಂಪಿನೊಲು
ಮರದ ನಡುಹಸುರಲ್ಲಿಯವಿತವಿತು ಅರಸಿಕೆಯ
ಆಸೆಯನು ಕೆರಳಿಸುತ ಇದ್ದೆ ಎದೆಯರಳಿಸುತಲೆ. ೨

ಅಲ್ಲಿಲ್ಲಿ ಎಂದೆಂದು ನಾಲ್ಕು ಸಿಟ್ಟಿಗೆ ತಿರುಗಿ
ಅರಸರಸಿ ಸೋತಿರಲು ಕಣ್ಚವುಟುವನಿತರಲಿ
ಕರಿದೊಂದು ನೆರಳಾಗಿ ಹಾರಿಹೋದೆಯ ನೀನು
ಕೃಪೆದೋರಿ ಕೈಜಾರಿ ಹೋದ ಜೇಂಗೊಡದಂತೆಯೆ. ೩

ಹಲತೆರದ ಅನುಭವದಿ ಬಾಳಿಂದು ಮಿಂದಿದಿಹುದು
ಕವಿಹೃದಯ ತೆರೆದಿಹುದು ನಿನ್ನುಲಿಗೆ ಮರುಳಾಗಿ
ಎಂಥ ಮೈಯಲಿ ಇಂಥ ಸವಿಯೆಂಬ ಲವಲವಿಕೆ
ಎಂದಿನಿಂದಲು ಮೂಡಿ ಮನದೊಳದಿ ಮಾಸದಿಹುದು. ೪

ಬೆಳಗುಜಾವದಿ ನಿದ್ರೆ ತಿಳಿದೆದ್ದಿರಲು ನಾನು ಕುಹೂಕುಹೂ
ಎಂಬ ದನಿ ಮರಮರಳಿ ಮರದಿಂದ ಸೂಸಿ ಬರೆ

ಈ ಭೂಮಿ ಹೊಸಲೋಕದಂತಾಗಿ ಒಗ್ಗಿನಲಿ
ಮುಳುಗಿಹೆನು ನಿನ್ನ ಕಾಣುವ ಬಯಕೆ ಹೆಚ್ಚಿತಾಗಿ. ೫

ಜೀವನದ ಬೇಗೆಯಲಿ ಬಾಳು ಬೇಡೆಂದೆನಿಸಿ
ಕಂಗೆಟ್ಟು ಜೀವವೆನ್ನದು ಬೆಂದು ನಿಂದಿರಲು
ಉರಿಬಿಸಿಲ ಝಳದಲ್ಲಿ ಸುರಿದ ಸವಿಮಳೆಯಂತೆ
ನನ್ನೆದೆಗೆ ತಂಪೆರೆಯೆ ನೀನಿಲ್ಲಿ ಬಂದು ನೆರೆದೆ. ೬

ಇಂದು ಹಣ್ಣಿತು ನಿನ್ನ ಕಾಣುವಾ ಕನವರಿಕೆ
ಉದಯಕಿರಣವ ತೊಡೆದ ಹುಣಿಸೆಮರದುದಿಯಲ್ಲಿ
ಮರೆಯಿರದೆ ಹಾರಿಹೋಗದೆಯಿದಿರು ತೋರುತಿಹೆ
ಕತ್ತೆತ್ತಿ ಕುಕಿಲುತಲಿ ಕುಳಿತಿರುವ ಕೋಗಿಲೆ! ೭

ಕಿರಿದಾದ ಕಿರುಮೈಯು, ರೂಪದಲಿ ಒರಟು
ಬಣ್ಣದಲಿ ಕಾಗೆಮರಿ ಎಂದೆನಿಸುವ ನಿನ್ನಯಾ
ಕೊರಳಲ್ಲಿ ಎಂಥ ಸವಿ! ಯಾರದನು ನೀಡಿದರು?
ಕುಕಿಲುತಿಹೆ ಕುಕಿಲುತಿಹೆ ದನಿಯುದಿಸಿ ಕುಕಿಲುತಿಹೆ! ೮

ಪಂಚಮದ ಸ್ವರದಿಂದ ಗಂಧರ್ವಗಾನವನೆ
ಬಣ್ಣಿಸುವ ಮೋಹನಕಲಿ ಹಕ್ಕಿ, ಮನಸ್ವಕ್ಕಿ
ಹರಿವ ನಿನ್ನುಲಿ ಗಾನಕಿಂತಲೂ ಅತಿಮಧುರ!
ಹೋಲಿಕೆಯೆ ಅದಕಿಲ್ಲ ಇದು ಮಾತುಗಳಿಕಲ್ಲವು. ೯

ಸಾಮಾನ್ಯದೆದೆಯಲ್ಲಿ ಕಾಣದೊಲು ಬೆಳಗುತಿಹ
ಭವ್ಯ ಸುಂದರ ಗಹನ ಮಾಧುರ್ಯ ಮೂರ್ತಿಯೆ!
ಕೋಗಿಲೆಯು ಬರಿಹೆಸರು ನೀನಿರುವೆ ನಿಜದಲ್ಲಿ
ಸಾಂತದೊಳಗಿಹನಂತದಾನಂದ ಸಂಕೇತವೆ! ೧೦

# ಬನ್ನಿಯೆಲೆಗಳ ಹಾಡು

ಬಾಡಿದೆಲೆಯೆಲೆಯಾಗಿ ಹೋದರು
ನಮ್ಮ ಬಾಳಿನ ಹಣ್ಣು ಹಂಪಲ-
ವಿಂದು ಪಡೆದೆವು ವಿಜಯದಶಮಿಯ
ಅಮೃತಯೋಗದಲಿ.

ನಾಡಜನತೆಯ ಹರುಷ ಹಬ್ಬಕೆ
ಕೆಳೆಯಕೂಟಕೆ ನಮ್ಮನರ್ಪಿಸಿ
ಕೋಟಿಕ್ಕೈಗಳಲಾಡಿ ನಮ್ಮಯ
ಮುಕುತಿಕಂಡಿಹೆವು. ೧

ನೆಲವು ಮುಚ್ಚಿದ ಹಸುರ ಪಸರದಿ
ಹಲವು ಮರಗಳಲೊಂದು ಮರವೆನೆ
ಹಿರಿಮೆ ಮೆರೆಯುವ, ಹೆಸರು ಹೊಂದದ
ಬೇರುಬೊಡ್ಡೆಯಲಿ

ಕಣ್ಣು ತೆರೆದರು ಮೊಳೆತು ಬೆಳೆದರು
ಹಣ್ಣಿತೀದಿನ ನಮ್ಮ ಬಯಕೆಯು
ಪುಣ್ಯವಾಗಿತು ಹೃದಯ ಬೆಸೆಯುವ
ಸಫಲಸೇವೆಯಲಿ. ೨

ಮಾವುದಳಿರಿನ ಹಣ್ಣುಕಾಯಿಯ
ಚೆಲುವ ಮಾಯೆಯು ನಮ್ಮಲಿಲ್ಲವು
ಬೇವಿನಾ ಕಹಿ ಹೂವ ಹಿತವೂ
ತೋರದೆಮ್ಮೊಳಗೆ

ನರದಿ ಹರಿಯುವ ಒಲವು ತೊರೆಯುದೆ
ಕರೆವ ಕರೆಯಾಗಿರಲು ಕಲ್ಲೆದೆ
ಕರಗಿ ಬೆರೆತವು ಇಂದಿನೀದಿನ-
ವೇದು ಬಗ್ಗಿದೆವು. ೩

ಬೇರುಬೇರೊಳು ಹೀರಿಕೊಳ್ಳುತ
ಭೂಮಿತಾಯಿಯು ಮೊಲೆಯ ಹಾಲನು
ಕೊಂಬೆಕೊಂಬೆಗೆ ಹಬ್ಬಿ ಹಸುರಿಸಿ
ತುಂಬಿ ಬೆಳೆದಿರಲು

ಎಲ್ಲರೊಲು ನಾವಾಗಿ ಇಂದಿಗೆ
ಎಲ್ಲರನು ಒಂದಾಗಿ ಬೆರಸಿರೆ
ತಾಯ ಋಣವನು ತಿರುಗಿ ಸಲ್ಲಿಸಿ
ಮರೆಯ ಸೇರುವೆವು. ೪

ರೂಢಿವಶದಲಿ ನೀಡಿ ನಮ್ಮನು
ಕೂಡಿರುವ ಜನದೆದೆಯ ಆಳದಿ
ರೂಢವಾಗಿಹ ಕೋಪತಾಪಗ-
ಳಳಿದು ಹೋಗುವವು.

ನಾವು ಕಂಡಿಹ ಪ್ರೀತಿದರುಶನ
ನಮ್ಮ ನಾಡಿಗಳಿಂದ ಕೈಕೈ-
ಜೀವಜೀವಕೆ ಮಿಂಚಿ ಹರಿಯಲು
ಧನ್ಯರಾಗಿಹೆವು. ೫

ವಿರಸವಾವುದೊ ಮಾತುಕತೆಯನು
ಮರಸಿರಲು ಸತಿಪತಿಯರಿರವಿನ
ಸರಸಿಯಲಿ ಕೊಳೆಕದಡು ಸೇರಿಸಿ
ರುಚಿಯ ಕಳೆದಿರಲು

ಇಂದು ಒಮ್ಮೆಯೆ ‘ ಬನ್ನಿಕೊಳ್ಳಿರಿ ’
ಎಂದು ಬಾಗುತ ಮಡದಿ ನುಡಿಯಲು
ಮಿಂದು ಕಂಬನಿಕೊಳದಿ ದಂಪತಿ
ಬೆರೆಂಪೆ ಮೆರೆದಿಹೆವು. ೬

ಬಾಗಿದವರಿಂದಿಸೀ ದಿನ ಕೈ-
ತೂಗಿ ಬನ್ನಿಯು ಕೊಟ್ಟುಕೊಂಡಿರೆ,
ತ್ಯಾಗ ವಿನಯ ವಿವೇಕಸಾರದಿ
ಮನವ ತೊಡೆದಿಹರು

ಬಾಗಿದವರನು ಎತ್ತಿ ಹರಸುತ
ನೂಗಿ ಹೆಮ್ಮೆಯು, ಹಿರಿಯ ನಲ್ಮೆಯ
ಯೋಗದಲಿ ತಾವ್ ಹಿರಿಯರೆನಿಪರು
ಎಂದು ಹೊಂಗಿಹೆವು. ೭

ನಮ್ಮ ಹಂಚುವ ಹಬ್ಬದೀದಿನ
ತಮ್ಮ ಪ್ರೀತಿಯ ದೇವತೆಯನೇ
ನೆಮ್ಮಿ ಪೂಜಿಸುತಿಹರು ಮನುಜರು
ಕೈಯ ಮಂಟಪದಿ.

ಬನ್ನವೇನೇ ಬರಲಿ ಬಾಳುವ
ನನ್ನಿಯನು ಬರಮಾಡುವೆದೆಯನು
ಬನ್ನಿಹಬ್ಬದಿ ಬಲಿಸಿ ನಿಂದಿಹ-
ರೆಂದು ತಣಿದಿಹೆವು. ೮



# ೨. ಪ್ರಪಂಚ.

## ತಾಯ ಕರೆ

ಕರೆಯುತಿಹಳು ಒರೆಯುತಿಹಳು
ಕೊರಲನೆತ್ತಿ ನಮ್ಮ ತಾಯಿ
“ ಕಂದಗಳಿರ ಸೋಲುಬಾಳ
ಮುಗಿಲುಗಂಗೆಯಲ್ಲಿ ಮೀಯಿ ”

“ ನನ್ನ ನೆಲದಿ ಬೇರನಿಳಿಸಿ
ನೀರಹೀರಿ ಗಾಳಿತಾಳಿ
ನೂರು ಮರವು ಬಳ್ಳಿಯಾಗಿ
ದಾಂಗುಡಿಸಿ ಬೆಳೆದು ಬಾಳಿ. ೧

ಬೆಳಗೆ ತೋರಿ ಭೇದ ಮೀರಿ
ನಾನೆ ನಿಮ್ಮ ಬಾಯುಮಂತ್ರ
ನಲುಮೆನುಲಿಯ ಜಿನುಗಿನಿಂದ
ಒಂದುಗೊಳಿಸುತಿರುವ ತಂತ್ರ. ೨

ಎಂದಿನಿಂದೊ ಇದ್ದ ನಾನು
ಹಳಮೆಯಿಂದ ಹಳಗುತಿರುವೆ
ಮುದುವೆ ಹಸುದು ಚೆಲುವೆ ನಿಜವು
ನಿಮ್ಮ ಒಳದಿ ಬೆಳಗುತಿರುವೆ. ೩

ಕವಿಯ ಎದೆಯು ಹಿಂದೆ ನಾಡ
ಚೆಲುವಿಗರಳಿ ಹೊಲೆಗೆ ಕೆರಳೆ
ರಸದ ಸ್ಫೂರ ಬರಿಸಿ ನಾನೆ
ನುಡಿಯು ಹೊಳೆಯ ಹರಿಸಿದವಳೆ. ೪

ರೂಪಾರಿಯು ಮನದ ಮೊನೆಯ
ಕಲೆಯು ರೂಪು ನಾನೆ ಆಗೆ
ಕಂಡರಣೆಯು ಕೈಯು ಕುಸುರ-
ನೆರೆದೆ ಜಗವು ತಲೆಯು ತೂಗೆ. ೫

ಮೋಹನೇಹ ಬಳ್ಳಿ ತೊಡರೆ
ಬಾಗದೇರ ನೇರ ನಿಲವ
ಸಿರಿಗೊಮ್ಮುಟ ಮೊಗನಗೆಯುನು
ಬಗೆದೆ ಚಿರಸ್ಮರಣ ದೀಪವ. ೬

ಅರಸುಮನದಿ ಜನದಿ ನಾನೆ
ಹರವ ಹದವ ಹೊಂದಿಕೆಯುನು
ಶರಣರಲ್ಲಿ ಸಿದ್ಧರಲ್ಲಿ
ಶೀಲವುಕೆನೆಯು ತುಂಬಿಸಿದೆನು. ೭

ಏಳಿ ಮಕ್ಕಳೇಳಿ ನನ್ನ
ಕೃತಿಯ ಶ್ರುತಿಯ ನೋಡಿ ಕೇಳಿ
ಮೈಜುಮ್ಮಿಸಿ ಮನಸೊಮ್ಮಿಸಿ
ಹೊಸತು ಯುಗದ ಶ್ರುತಿಯ ಹೇಳಿ. ೮

ನಾಡತುಂಬ ತೊಡರುಕಾಡು
ತರಿದು ಹಸನಗೊಳಿಸುವಿರ ?
ಘನದಿ ಕಣ್ಣು ಚಣಚಣವೂ
ದುಡಿದು ಹಣ್ಣು ಆಗುವಿರ ? ೯

ನುಡಿಯು ಹಲವು ಮತದ ಹಲವು
ಅರಿತು ತನ್ನ ಸವಿಯ ಸ್ವರವ
ಬೆರೆಯಲೆನ್ನ ಗೀತದಲ್ಲಿ
ತೊರೆದು ಎಲ್ಲ ಅಪಸ್ವರನ. ೧೦

ಎಲ್ಲ ದಿಸೆಯು ಗಾಳಿ ಬೆಳಕು
ತೂರಿ ಇಲ್ಲಿ ಬಂದು ಸೇರೆ
ತೆರೆದ ಎದೆಗೆ ಇಲ್ಲ ಮೇರೆ
ತಿಳಿದ ಮನಕೆ ಇಲ್ಲ ಮೇರೆ. ೧೧

ಕನ್ನಡವೆನೆ ಹಿರಿಯ ಮನದ
ಕನ್ನಡಿ ಇದು ಅವಿರತವು
ಭಾರತವೇ ಕನ್ನಡವು
ಕನ್ನಡವೇ ಭಾರತವು." ೧೨



# ಆದರಾಂಜಲಿ

( ದಿವಂಗತ ಪಂಡಿತ ತಾರಾನಾಥರಿಗೆ )

೧

ಕತ್ತಲೆಯು ಸುತ್ತಲೂ ಮುಸುಕಿರುವ ಕನ್ನಡದ
ಆಗಸದಿ ಹೊಸಬಾಳ ಹೊಳಪಿನಲಿ ಮಿನುಗುತಿರೆ
ಹಲತಾರೆ, ಬೆಳ್ಳಬೆಳಕಿನ ದಾರಿಯನು ತೋರೆ
ನಾಯಕನ ಹಂಬಲಿಸಿ ನಾಡನುಡಿ ಕಾದಿರಲು,
ಮೆಲ್ಲಮೆಲ್ಲನೆ ಬೆಳೆವ ಬಗೆಯೆಲ್ಲವನು ಮೀರಿ
ಹುಣ್ಣಿವೆಯ ಪೂರ್ಣತೆಯೆ ಮೈವೆತ್ತ ತೆರನಾಗಿ
ಒಮ್ಮೆಯೇ ಕ್ಷಿತಿಜದಲಿ ಬಂದ ತಾರಾನಾಥ!
ಉದಯಕಾಲದಿ ನಿನ್ನ ಕಿಡಿನುಡಿವ ಕೆಂಪೆಸೆವ
ಕೋಪರೂಪಕೆ ಹೆದರಿ ಹಿಂಜರಿದ ಜನವೊಡನೆ
ಕಂಡು ಸವಿಯಿತು ನಿನ್ನ ಹಾಡುನುಡಿ ಸವಿ ಸುಧೆಯ
ಶಾಂತಿಯನು ಕಾಂತಿಯನು. ಯಾವ ಕೊರತೆಯು ನಿನಗೆ?
ಮಿಗಿಲು ಬುದ್ಧಿಗೆ ಜಗದ ಸಕಲ ಜ್ಞಾನದ ಜೋಡು,
ಹಲವು ಭಾಷೆಯ ಬಲ್ಲ ಮಾತರಿವ ಮಲ್ಲತನ,
ವೈದ್ಯಕದಿ ಮೇಲುಗೈ, ಹಾಡಿನಲಿ ಸಂಗೀತ-
ಸರಸತಿಯ ವರಹಸ್ತ, ಯೋಗನತ ರಾಜಕಳೆ—
ಕಲಾನಿಧಿಯೋಷಧೀಪತಿ ಸುಧಾಸ್ಯೂತಿಯಕೊ
ಬಂದ ಹುಣ್ಣಿವೆ ಚಂದ್ರ, ಕನ್ನಡದ ಭಾಗ್ಯವನು
ತೆರೆಯಿಸುವ ನಾಯಕನು, ಕನ್ನಡದ ಗುಡಿಕಟ್ಟಿ
ಆದರ ಕಳಸದ ಹೊನ್ನಹೊಗರಿನೊಳು ಮೇಳವಿಸಿ
ತನ್ನ ಕೀರ್ತಿಯ ಜೊನ್ನ ಹರಿಸುವನು ನೆಲದುಂಬ
ಎಂದು ತೋರಿತು ಆಶೆ, ಬಾಡಿರುವ ಮರುಬುವಿಯ
ಮೊಗದಲ್ಲಿ ಮೆಲುನಗೆಯ ಸೂಸಿ ಹಸುರನು ಹಾಸಿ.

ಕಾಲಪಥದಲಿ ನೀನು ಮೇಲೆ ಮೇಲೇರುತಲಿ
ಬಗೆಯ ಬೆಡಗಿನ ಮಧುರ ಮಾತುಗಳ ಮಾಯೆಯನು
ಪಸರಿಸಿದೆ, ಸುಳ್ಳು ಧರ್ಮದ ಜೊಳ್ಳು ಜೀವನದ
ಹೊರಗೆಳೆದು ತೋರಿಸುತ ನಿರ್ಭಯದ ನುಡಿಗಳಲಿ
ಸತ್ಯವನು ಸಾರುತಲಿ ಕಲೆಗೊಂಡ ಕಳೆಯಾದೆ.
'ಪ್ರೇಮಾಯತನ' ದಲ್ಲಿ ಕಾರ್ಯಕ್ಷೇತ್ರವ ಕಂಡೆ
ಹೊಸ ದರ್ಶನವ ನಿನ್ನ ಪೀಳಿಗೆಯ ಹೃದಯಪಟ-
ದಲಿ ಬರೆದೆ, ಆಧಿವ್ಯಾಧಿಗಳಿಂದ ಜರ್ಜರಿತ-
ಜನತೆಯನು ಪ್ರೀತಿಸಿ ಸೇವಿಸಿದೆ, ಅದ್ಭುತದ
ಕತೆಯಂತೆ ಬಾಳನು ಸಾಧನೆಯಾಗಿಸಿ ನೆರೆದೆ.

೧೨

ಕನ್ನಡಕೆ ನಿನ್ನ ಕೃತಿ ಮಾನ್ಯ ಚಿರಸ್ಮರಣೀಯ-
ವಾದರೂ ಕನ್ನಡದ ದರ್ಶನವು ಫಲಿಸಿತೇ,
ನಾಯಕನ ಕನವರಿಕೆ ಕೈಗೂಡಿತೇ, ಜನಕೆ
ನಿನ್ನ ಯೋಗದ ಸಿದ್ಧಿ ಕೈನೆಲ್ಲಿಯಾಯಿತೇ
ಎಂಬುದಕೆ ಏನು ಮಾರುತ್ತರವು? ಬರಿ ಮೌನ.
ಹುಣ್ಣಿಮೆಯ ಚಂದಿರನ ಸುತ್ತಾವುದೋ ಬಿಳಿಯ
ಕೆರೆಯ ಕಟ್ಟಿದರಾರೊ, ಪರಿವೇಷಮರೆಯಿಂದ
ಹೊಗರಿಳಿದು ಮಂಜಿನೊಲು ಮಸಕಾಗೆ ನೋಟದಲಿ.
ತನ್ನ ಮೆರೆಯುವ ಹೆಮ್ಮೆ ಹೊರಸೂಸಿ ಇದ್ದುದೇ
ಸಿದ್ಧಿಯೆನೆ, ತೋರಿದವು ನಾಡುನುಡಿ ಕಿರಿದಾಗಿ,
ಕಡುಟೀಕೆ ಹೃದಯ ಬಿರುಸಾಗಿಸಿತು, ಜನಮನವ
ದೂರಗೊಳಿಸುತ ಹೋಗಿ ಸಮರಸವ ಕಳೆದಿರಲು
ಪಂಥ ಕಟ್ಟುವ ಪಂಥ, ವಾದ ಗೆಲ್ಲುವ ಹುರುಡು,
ಅತಿಬುದ್ಧಿಯರಿತಿರುವ ಎರಡುಮೊನೆಯಸಿಧಾರೆ,
ಮೋಹ ಮಮತೆಗಳಾಟ ಪೂರ್ವಗ್ರಹಗಳ ಮಾಟ

ಚಿತ್ರಸರವನು ಸೇರಿ ಕದಡಿದವೊ ಏನಾಯ್ತೊ
ವಿಧಿಬಲ್ಲ, ಹುಣ್ಣಿಮೆಯ ತುಂಬುಗಳೆ ಹೊರಹೊಮ್ಮಿ
ಹಣ್ಣತಿಲ್ಲವು ಮಾತ್ರ, ಕನ್ನಡದ ಕನವರಿಕೆ
ಕೈಗೆ ಬಂದಮೃತಘಟ ಕೆಳಗುರುಳಿದಂತಾಗಿ
ಫಲಿಸದಿದೆ, ನಾಡು ನಿಂತಿದೆ ಇನ್ನು ಸಂತಸಿಸಿ.
ನಿನ್ನ ನಿಧನದಿ ನಷ್ಟ ಕನ್ನಡಕಪಾರ ನಿಜ
ನಿನ್ನ ಜೀವಿತಗತಿಯು ನಷ್ಟವದಪಾರತಮ.
ಸಂಶಯವೆ ? ಪರಮಪದವನು ಪಡೆವ ಯಾತ್ರೆಯಲಿ
ತನಿಗೊಳುವ ರಾಜಯೋಗಿಯು ನೀನು ಭೂಮಿಯಲಿ
ತಿರುಗಿಬರೆ ಪೂರ್ಣಿಮೆಯ ನಿಚ್ಚನೆಲೆವನೆಯಾಗಿ
ನಿಂದಿರುವೆ, ಮರಣಗ್ರಹಣವ ಕಳೆದು ನಿನ್ನೊಳದ
ರಾಜತೇಜವ ಮತ್ತೆಮಾಗಿಸುತ ಹೊರಸೂಸೆ
ಕನ್ನಡದ ಕಡಲತೆರೆ ತನ್ನ ದೊರೆಯನು ಕಂಡು
ಉಕ್ಕೇರಿ ನಲಿದೀತು, ಕುಣಿಕುಣಿದು ತಣಿದೀತು.



# ಕನ್ನಡದ ವೀರಶ್ರೀ

( ದಿವಂಗತ ಶ್ರೀಯವರನ್ನು ಕುರಿತು )

೧

" ಕನ್ನಡದ ವೀರಶ್ರೀ ಕಣ್ಮರೆಯಾಯಿತೆಂದು
ನಾಡುನುಡಿ ಹೆಗ್ಗಳಿಕೆಯನು ತನ್ನ ನರನರದ
ನಾಳದಲಿ ನೆರೆತುಂಬಿ ತಪದ ಗವಿಯಿಂದೆದ್ದು
ತನ್ನ ದುಃಖವ ತುಳಿದು, ಹೆರರ ತುಳಿತಕೆ ಸಿಕ್ಕು
ಹುಡಿಯಾದ ನಾಡಿಗರ ಕೆಚ್ಚನೆಚ್ಚರಿಸಲಿಕೆ
ಕನ್ನಡದ ಬಾವುಟವ ಹಿಡಿದೆತ್ತಿ ಹಾಡುತ್ತ
ತಾಯ ನೋಟವ ಕಂಡು ಏಳೆಂದು ಬಾಳೆಂದು
ಹುರಿಗೊಂಡು ಕರೆಯುತ್ತ ಹಗೆಯೊಡನೆ ಹೋರುತ್ತ
ಮಿರಿಮಿಂಚಿ ಹಿರಿಮೊಳಗಿ ಮಳೆಗರೆದು ತಂಪೆರೆದ
ಕನ್ನಡದ ವೀರಶ್ರೀ ಕಣ್ಮರೆಯಾಯಿತೆಂದು "

೨

" ಕನ್ನಡದ ವೀರಶ್ರೀ ಕಣ್ಮರೆಯಾಯಿತೆಂದು ?
ತಿಳಿಯದೇ ಇದು ನಿನಗೆ ಹೊರಗಣ್ಣ ಸತ್ಯವೆಂದು ?
ನಾಡಿನೆದೆಯಲಿ ಹೊಕ್ಕು ಹಮ್ಮುಸೊಮ್ಮನು ನೀಡಿ
ಒಂದೆ ತಾಯಿಯ ನಿಚ್ಚನೋಟವನು ಕೊರೆಕೊರೆದು
ಇದಕಾಗಿ ಮಡಿಯುವೆನು ಇದಕಾಗಿ ಮಡಿಯುವೆನು
ಎಂಬ ಕನಸನು ನಿಲಿಸಿ ಸಂಕಲ್ಪವನು ಬಲಿಸಿ
ಪ್ರಭೆಯೊಂದೆ ಶತಕೋಟಿ ಚಿಕ್ಕೆಯಲಿ ಚೆದರಿದೊಲು
ನೂರಾರು ಕಿಡಿಯಾಗಿ ನಾಡಿನಲಿ ಅವತರಿಸಿ
ತಾ ಹಿಂದೆ ಸರಿದಿಹುದು ತನ್ನ ಕೃತಿ ನೋಡಲೆಂದು.
ಕನ್ನಡದ ವೀರಶ್ರೀ ಕಣ್ಮರೆಯಿಲ್ಲವೆಂದು ! "

# ಸಾಲದು

ಸಾಲದು ಸಾಲದು ಸುಲಭದ ಕಾಣಿಕೆ
ಕಾಲವು ಬಂದಿದೆ ಸತ್ವಪರೀಕ್ಷಣಕೆ
ಶತಶತಮಾನದ ಬಿಗುವಿನ ಸಂಕಲಿ
ಗತಿಸುವುದೇ ತುಸುಮಾತ್ರದ ತಿಣುಕಿನಲಿ ?
ನಾಡಿಗೆ ನಾಡೇ ತನ್ನೆಚ್ಚರಿಸಿ
ನರನರಸ್ತೋಮವು ಕೆಚ್ಚನು ಹೆಚ್ಚಿಸಿ
ಒಂದೇ ಕನಸಿನ ಒಂದೇ ಮನಸಿನ
ಕೂಟದ ಬಲದಿಂದಲುಗಿಸೆ ಬಂಧನ
ಸಿಡಿಯುತ ಕಳಚದೆ ? ಬಿಡುಗಡೆ ತಾರದೆ ?
ನೂತನ ರಾಷ್ಟ್ರದ ಬೀಜವನೂರದೆ ?
ಸೆರೆಮನೆಯೆಂಬುದನರಮನೆಯಾಗಿಸಿ
ಬಹುವಿಧ ಹಿಂಸೆಗೆ ಮೈಮನ ತೂಗಿಸಿ
ಹರಣವ ಬಿಡುವಿಗೆ ಮುಡಿಪೆಂದೊರೆಯುತ
ಮರಣವ ಕರುಣೆಯ ಕರೆಯೊಂದೊಲಿಯುತ
ತ್ಯಾಗದ ಯಾಗದಿ ತನ್ನೊಲ್ಲವನು
ಹೋಮಿಸಬಲ್ಲನೆ ಧನ್ಯನು ಧೀರನು.
ಇಂದಿನ ಯಾತನೆ ಹಿರಿದಹುದಾದರು
ಬರಲಿಹ ಭವಣೆಗೆ ಅದು ಯಾವಿದಿರು ?
ಹಿಮವತ್ ಪರ್ವತ ನಡುಗಿಸಿ ತಾವು
ಶೋಕದ ಒರಲಿಕೆ ಗದುಗಮಿಸ್ಯಾವು
ನದಿಗಳ ನೆರೆಯನು ಬರಿಸುತ ದಿನವು
ನೆತ್ತರ ಹೊಳೆಗಳು ಹರಿಹರಿದಾವು
ನಾಡಿನ ಎಲ್ಲೆಡೆ ಹೇಳಲು ಬಾರದ
ನಿಸರ್ಗ ಕೋಪದ ಮಾನವ ತಾಪದ

ಉರಿಯುರಿಪತ್ತುತ ನಾಲಿಗೆ ಚಾಚುತ
ನಮ್ಮಯ ಧೈರ್ಯವ ಜಾಗವ ಕೆಣಕುತ
ಬರುವುದು ನಿಶ್ಚಯ, ಬೆದರುವುದೇಕೆ ?
ಯಾವುದೊ ಶಕುತಿಯು—ಸಂಶಯವೇಕೆ ?—
ಇಂದಿನ ನಾನಾದುಃಖದ ಭಾರವ
ತಂದಿದೆ ಮಾಡಲು ಧೈರ್ಯದ ಮೇರುವ
ಈ ಸ್ವಾತಂತ್ರ್ಯದ ಕುದಿವಾವಗೆಯಲಿ
ವಿಧವಿಧ ತಾಪವ ತಾಳುತ ನಗೆಯಲಿ
ಹಣ್ಣುತ ಬಲಿಯುತ ಹುಟ್ಟುತಲಿಹನು
ನಮ್ಮಯ ಹೆಮ್ಮೆಯ ರಾಷ್ಟ್ರದ ಪುರುಷನು.

( ' ಅನ್ನ ' ಕಾದಂಬರಿಯಲ್ಲಿ ಬಂದುದು. )



# ಸೆರೆಮನೆ

“ ಸೆರೆಮನೆಗೆ ಬಂದೆ ಅರಮನೆಗೆ ಬಂದಹಾಗೆ
ಕೈಬೇಡಿಯೆಂಬ ‘ ವಸ್ತ್ರ ’ ಖಣಖಣಿಸಿ ತೂಗೆ
ಸಮವಸ್ತ್ರಧಾರಿಗಳು ಹಿಂದೆಮುಂದಿರಲು
ಬಿಡುಗಡೆಯ ನಾಡಿನರಸು ನಾ ನಡುವೆ ಇರಲು
ಮಾಡು ಇಲ್ಲದಿರೆ ಮಡಿಯೆಂಬ ನುಡಿಯ ಗುಡುಗು
ನಾಡಗುರುಮುಖದಿ ಹೊರಹೊಮ್ಮಿ ಪಡೆಯೆ ಬೆಡಗು
ಬಗೆಯ ಬಂಧನವ ತರಿದೊಗೆದು ನಾವು ಕ್ಷಣದಿ
ಮುಕ್ತಭಾರತದ ಮೊದಲ ಪ್ರಜೆಯಾಗಿ ಮುದದಿ
ಜಯವೆಲ್ಲ ದೂರ ಗಾಳಿಯಲಿ ತೂರಿ ಹಾರಿ
‘ ಹೊರಟ್ಹೋಗು ’ ಎಂದು ಪರರಾಳಿಕೆಗೆ ಸಾರಿ
ಹೊಸತಿನುದಯಕ್ಕೆ ಹಳೆಯ ಕೊಳೆ ತೊಳೆಯುವಂತೆ
ನವಸೃಷ್ಟಿಗಾಗಿ ಪ್ರಳಯವಿಳೆ ತಳೆಯುವಂತೆ
ಕಂಬಿಯನು ಕಿತ್ತಿ ನಿಲ್ಮನೆಯ ಬೂದಿಮಾಡಿ
ಗಾಡಿಗಳ ನೆಲಕೆ ಹೊರಳಿಸುತ ಆಟವಾಡಿ
ಹೊರಬಳದ ದಾಸ್ಯಚಿಹ್ನಗಳ ತೊಡೆದು ನಾವು
ಬಿಡುಗಣ್ಣರಾಗಿ ನಿಂದಿಹೆವು ಬರಲಿ ಸಾವು.
ಸೆರೆಮನೆಯು ಇದುವೆ? ನಿನಗೆ ತಿಳಿಯದೆ ಮರುಳೆ?
ಮುಕ್ತಭಾರತದ ವೀರರಾಸರೆಯ ನೆರಳೆ!
ಹೊರಗೆಂಥ ಭವಣೆ ಬರಗಾಲ ಮಸಣ ಮತ್ತೆ
ನೂರಾರುಗಸಣೆ ಜೀವಜೀವವನು ಸುತ್ತೆ
ಯಾರೊ. ಹೇಳುವರು ಅಲ್ಲಿ ಮನೆಯಲ್ಲಿ ಶೋಕ
ನಿಶೆಯೂರಿನಿಂತು ನವೆಸುತಿದೆ ಆಪ್ತಲೋಕ
ತಾಯಿ ಬಾಣತಿಗೆ ಕ್ಷಯವಂತೆ ಅಕಟ ತಂದೆ
ಸಾವು ಹಾಸಿನಲಿ ತಾನೊರಗಿ ಜನದ ಮುಂದೆ

ನನ್ನ ಶಪಿಸುವನು ಬಾ ಎಂದು ಬರಿದೆ ಕೂಗಿ
ತಮ್ಮದಿರು ತಿರಿಯುತಿಹರು ಮನೆಮನೆಗೆ ಹೋಗಿ
ಗೋಳಾಟಕೆಣೆಯೆ ? ಮನೆಯೆದ್ದು ಕರೆಯುತಿಹುದು
ನಾಡಕರೆ ಅದಕು ಹಿರಿದಾಗಿ ಮೊರೆಯುತಿಹುದು.
ಭಾರತದ ತಾಯೆ ! ಬಿಡುಗಡೆಯ ಹೋಮದಲ್ಲಿ
ಎಲ್ಲವನು ನೀಡಿ ನಿಂದಿಹೆವು ಪ್ರೇಮದಲ್ಲಿ
ಹೋಮದುರಿಯಿಂದ ನೀನೆದ್ದು ಮೊಗವ ತೋರಿ
ಹರಸೇಳು ತಾಯೆ ನಮ್ಮಲ್ಲಿ ನೋಟವೂರಿ. ”

( ' ಆಸ್ಥ ' ಕಾದಂಬರಿಯಲ್ಲಿ ಬಂದುದು. )



# ಅನ್ನ

‘ ಅನ್ನ ! ಅನ್ನ ! ಕೊಟ್ಟರೆ ಚಿನ್ನ !
ಕೊಡದಿರೆ ನಾವೂ ನೀವೂ ಸಾವಿನ ಬಾಯಿಗೆ ಅನ್ನ !
ನಮಗಿಲ್ಲದೆ ನೀವುಣ್ಣುವ ತುತ್ತು
ನಮ್ಮಯ ವಿಷದುಸಿರಿನ ಹೆಬ್ಬಾವಿನ ಹುತ್ತು ! ’ ೧

ಕೇಳುವ ಕಿವಿಗೇ ಕೇಳುವುದಿಂತು
ಬರಿಯೊಡಲಿನ ನಡೆಹೆಣಗಳ ರೋಮರೋಮಗಳ ಮಾತು
ಕೇಳದ ಕಿವುಡರು ದೇವರೆ ಇದ್ದರು
ಬಡವರ ಪಾಲಿಗೆ ಕಮರಿದ ಕರುಳಿನ ಕಾಳ್‌ರಕ್ಕಸರು. ೨

ಅಯ್ಯೋ ವಿಗಡಸೆ ! ಎಲ್ಲಾ ಜೀವವು
ಒಂದೇ ಆತ್ಮನ ನೆಲೆಮನೆಯೆಂದೇ ಸಾರಿದ ದೇಶವು
ತಿನಲಿಲ್ಲದೆ ಸಾವರ ತಾ ನೋಡುತ
ತಿನ್ನುವ ನಲಿಯುವ ನಾಣಿಲಿಗಳ ನೆಲೆಯಾಗಿದೆ ಸರ್ವತ್ರ. ೩

‘ ನಮ್ಮಿಷ್ಟಕೆ ನಾವ್ ಬದುಕಿದರಾಯ್ತು
ಹೆರವರು ಇದ್ದರೆ ಇರಲಿ ಹೋದರೆ ಹೋಗಲಿ ಹೋಯ್ತು ’
ಇದುವೇ ಇಂದಿನ ಜೀವನ ದರ್ಶನ
ತಂದಿದೆ ನಮ್ಮಯ ಜನತೆಗೆ ಮರಣದ ಭೀಕರ ದರುಶನ ! ೪

ಅನ್ನದ ಕೊರತೆಯೆ ಸಾವಿಗೆ ಕಾರಣ ?
ಹೃದಯದ ಒರತೆಯು ಒಸರದೆ ಇರುವುದೆ ನಾಡಿಗೆ ಮಾರಣ.
ಹಬ್ಬಕೆ ಹಾಳಿಗೆ ಇರುವುದು ಅನ್ನ,
ಮಡಿವರ ಒಡಲಿನ ಕಿಚ್ಚನು ಆರಿಸೆ ಏನಿದೆ ಬನ್ನ ! ೫

ಉಳ್ಳವನಿಗೆ ತಿನಲೆಲ್ಲಾ ಬೇಕು
ಇಂದಿಗೆ ನಾಳಿಗೆ ಮುಂದಿಗೆ ಮೋಜಿಗೆ ಕೂಡಿಡಬೇಕು !

ಉಳಿದವರಿಗೆ ಏನಾದರೆ ಏನು ?
ಅವರದು ಕರ್ಮ ! ಸಿಗುವುದೆ ಎಲ್ಲರಿಗೂ ಸವಿಜೇನು ? ೬

ಒಮುವತ್ ಪರ್ವತದೆಲ್ಲಾ ಮುಲಿಗಳಿ
ಅನ್ನದ ರಾಶಿಯೆ ಆಗಿಯೆ ನಮ್ಮನು ಇದಿರಿಸೆ ಈಗಳೆ
ಹೊಟ್ಟೆಯು ಬಿರಿತು ಸತ್ತರು ಸರಿಯೇ
ಎಲ್ಲಾ ನಮಗೇ ನಮ್ಮವರಿಗೆ ತಿನಲಿಲ್ಲವೆ ಸಿರಿಯೇ ? ೭

ಬಡವರ ಹರಣದ ಲೂಟಿಯು ಮಾಡಿ
ಕಳ್ಳಪೇಟೆಯ ಕುಬೇರರು ತಂದನ್ನವ ಮಾರಾಡಿ-
ಹೆಣಗಳ ಬಣವೆಯ ರಂಗದ ಮೇಲೆ
ಹಣಗಳ ಕುಣಿತವ ಮಾಡಿಸಿ ಮಲೆವರು ತನುಮನ ಸೋಲೆ. ೮

ಹಸಿವರ ಗೇಣೊಡಲಿನ ವಾಮನನು
ಸೊಕ್ಕೇರಿದ ಬಲಿರಾಜರ ತಲೆಮೆಟ್ಟಲು ಹೊರಟಿಹನು
ಮೂಲೋಕವ ಮೂರಡಿಯಲಿ ನುಂಗಿ
ಅನ್ನವ ಕೊಡದಿರೆ ಪ್ರಾಣದ ಬಲಿಯನು ಕೊಳ್ವನು ಹೊಂಗಿ. ೯

ಅನ್ನವ ಹೆಚ್ಚಿಸಬೇಕೆಂಬುದು ಸರಿ
ಅದಕಿಂತಲು ಜನ ಹೃದಯದ ಮುಗಿಲನು ಒಗ್ಗಿಸುವುದು ಒರಿ
ನಾಡಿನ ಬಿಡುಗಡೆ ಬಂದರೆ ಮುಗಿಯದು
ಹೃದಯದ ಸೆರೆಮನೆ ಬೇಡಿಯ ಕಳಚಿ ಒಗ್ಗಿತ ನೆಗೆವುದು. ೧೦

ಅನ್ನ ! ಅನ್ನ ! ಹೃದಯದ ಅನ್ನ !
ಬೇಕಿಹುದಿಂದು ನಾಡಿನ ಬಾಳಿಗೆ ಗೈಯಲು ಚೆನ್ನ
ಮಾಡುವುದಿದಕೇ ಹಗಲಿರುಳೂ ತನ್ನ
ದೇಹವ ತೆಯ್ದು ಎದೆಯನು ಕುದಿಸಿ ಮರಣಕೆ ಅನ್ನ ! ೧೧

(' ಅನ್ನ ' ಕಾದಂಬರಿಯಲ್ಲಿ ಬಂದುದು.)

# ನಾವೆಲ್ಲಾ ಒಂದೇ

ನಾವೆಲ್ಲಾ ಒಂದೇ
ಹಿಂದೀಯರು ನಾವೆಲ್ಲಾ ಒಂದೇ
ಈ ಹೊಸ ರಾಷ್ಟ್ರದ ತಾಯ್ತಂದೆ
ಹಿಂದೆಂದೂ ತಲೆದೋರದ ಭವ್ಯ ಭವಿಷ್ಯವು ಇದೆ ನಮ್ಮುಂದೆ ॥ ಪ ॥

ಬೇರೆಯೆ ಎಂಬುದ ಗಾಳಿಗೆ ತೂರುತ
ಒಂದರ ತರತರವೆಂದೇ ಸಾರುತ
ಬಾಳಿರೆ ಬಾಂಧವ್ಯವು ನಾವಾಗಿಯೆ, ಮಿಗಿಲೇ ಮುಗಿಲದು ನಮ್ಮಿಂದೆ?
ನಾವೆಲ್ಲಾ ಒಂದೇ. ೧

ಮೂರೆಡೆ ನೀರಿನ ಕಂದಕವಿರಿಸಿ
ಮೇಗಡೆ ಮಲೆಗಳ ಕೊತ್ತಳ ನಿಲಿಸಿ
ಪ್ರಕೃತಿಯು ನೀಡಿದೆ ನದಿಗಳು ಹರಿಯುವ ನೆಲದಗಲವ ನಮಗೆಂದೇ
ನಾವೆಲ್ಲಾ ಒಂದೇ. ೨

ಬೇಡಿದ ಬೆಳೆಯನು ಹಸುರಿನ ಕಳೆಯನು
ಚಿನ್ನದ ಅದುರನು ಖನಿಜದ ಕಣಿಯನು
ಸೊಗದಲಿ ಬಾಳಿರಿ ಎಂದೊರೆಯುತ ನಿರಿಸಿದೆ ನಮ್ಮೆದಿರಲಿ ತಂದೆ
ನಾವೆಲ್ಲಾ ಒಂದೇ. ೩

ಹೊರದಾಳಿಗೆ ಕದ ತೆರೆಯುತ ಕರೆದೆವು
ಹೋರಿದೆವೆಮ್ಮೊಳು ನಾಣನು ತೊರೆದೆವು
ಹೆರವರ ಆಳಿಕೆಗೊಲಿಯುತ ನಾಡನು ಗೈದೆವು ಸೆರೆಮನೆಯೆಂದೇ
ನಾವೆಲ್ಲಾ ಒಂದೇ. ೪

ಜಗದೆಲ್ಲಾ ಜನಜಾತ್ರೆಯ ನೆರೆಸಿ
ಮತಪಂಥದ ಮೇಲಾಟವ ಮೆರೆಸಿ
ಕಲಿತಾ ತಾಳ್ಮೆಯ ತುಳಿಯುತ ನಿಂದೆವು ಬಂಧುಗಳನು ನಾವ್ ಕೊಂದೇ
ನಾವೆಲ್ಲಾ ಒಂದೇ. ೫

ಮುಗಿಲೆತ್ತರಕೇರಿದ ಮಾಪುರುಷರ
ಪಡೆದೆವು, ಪಾತಾಳದಿ ಬಿದ್ದಿರುವರ
ಮೇಲೇಳಿಸಲಾಗದೆ ನಾವ್ ಬದುಕನು ನರಕವ ಮಾಡಿದೆವಿಂದೇ
ನಾವೆಲ್ಲಾ ಒಂದೇ. ೬

ಹೋಗಲಿ ಹಳಕತ್ತೆ ಮರವಿನ ಕೊಳ್ಳಿಕೆ
ಸಾಗಲಿ ಬಾಳುವೆ ಹೊಸ ನಿರ್ಮಾಣಕೆ
ನಾಡಿನ ಬಿಡುಗಡೆ ಎಲ್ಲರ ಏಳಿಗೆ ಇದೆ ಗುರಿಯಾಗಿಸಿ ಮುಂದೇ
ನಾವೆಲ್ಲಾ ಒಂದೇ. ೭

ಹಲಶತಮಾನದಿ ಬಲಿದಿಹ ಜೇನೆಯ
ಕಳೆಯಲು ತ್ಯಾಗದ ತಾಳ್ಮೆಯ ಸೋನೆಯ
ಸುರಿಸಲು ಕಿರಿಯನ ಸಿರಿಯನು ತರಿದೋಟುವ ಹಿರಿಹಿರಿತನದಿಂದೇ
ನಾವೆಲ್ಲಾ ಒಂದೇ. ೮

ಎಲ್ಲಾ ಮತವೆಲ್ಲಾ ನುಡಿಗಡಣವು
ಸಲ್ಲುವ ಸ್ವಾತಂತ್ರ್ಯದಿ ನಿಲೆ ತಾವು
ಎಲ್ಲರ ನಲುಮೆಯೆ ಎಲ್ಲರ ನಂಟೇ ನಮ್ಮಯ ಮಂತ್ರವು ಒಂದೇ
ನಾವೆಲ್ಲಾ ಒಂದೇ. ೯

ಮಾನವ್ಯದ ಮಾಸಾಧನೆ ನಡೆದಿದೆ
ಸಂಮೇಳದ ಗೀತವು ಸವಿಪಡೆದಿದೆ
ನಮ್ಮಯ ನಾಡಿನ ವಿಧವಿಧ ಸ್ವರಗಳ ಸಮರಸ ಗಾಯನದಿಂದೇ
ನಾವೆಲ್ಲಾ ಒಂದೇ. ೧೦

( ‘ ಅನ್ನ ’ ಕಾದಂಬರಿಯಲ್ಲಿ ಬಂದುದು )

# ಅಮೃತಸಮಯ

( ೧೯೪೭ ಆಗಸ್ಟ ೧೫ ಸ್ವಾತಂತ್ರ್ಯದಿನವನ್ನು ನೆನೆದು ಬರೆದುದು. )

ಎಂದಿಗೋ ಏಸೋ ಜನ ಕನವರಿಸಿದ ಅಮೃತ ಸಮಯವು
ಇಂದಿಗೆ ಬಂದಿತು ಬಂದಿತು ಓಹೋ ಬದುಕಿದು ಸಫಲವು !
ಪರರಾಳಿಕೆಯಾ ಬಿಗಿಬಿಗಿದಾ ಸಂಕೋಲಿಗಳೆಲ್ಲಾ
ತಟತಟಹರಿದವು ಗಾಳಿಯು ಹೇಳುವದಿದೆ ಇದೆ ಸೊಲ್ಲಾ
ಸ್ವತಂತ್ರವಾಯಿತು ನಮ್ಮಯ ಹೆಮ್ಮೆಯ ಭಾರತ ದೇಶವು !
ಸ್ವತಂತ್ರ ಭಾರತ ಪ್ರಜೆಗಳು ನಾವು ! ಎಂತಹ ಸಂತಸವು !
ಹೆರರ ಗುಲಾಮರು ಹೇಡಿಗಳೆನ್ನಿಸಿಕೊಳ್ಳುವ ಶಾಪವು
ಮುಗಿಯಿತು ಇಂದೇ ಮೊದಲಾಯಿತು ಬಿಡುಗಡೆಯುಲ್ಲಾಸವು
ಇನ್ನಿಕೊ ನಾವೇ ನಮ್ಮಯ ನಾಡನು ನಾಕವ ನರಕವ
ಮಾಡುವ ಭಾಗ್ಯವಿಧಾತರು ನೇತರು ಎಂದರಿವುದು ಗೆಲವ
ಗೆಲವಿನ ಜೊತೆ ಸೋಲೊಂದಿದೆ, ಹರುಷದೊಡನೆ ಹಿರಿನೋವು
ಒಡೆಯಿತು ಹೋಳಾಯಿತು ದೇಶವು, ಕಂಡಿತು ಕೊಲೆಸಾವು.
ಎಲ್ಲೆಡೆ ವಿಜಯದ ಡಂಗುರ ಸಾರಿತು ಭೇದದ ನೀತಿಯು
ಆಳ್ವರು ಹೊರಟರು ಉಳಿಯಿತು ಅವರಾ ಆಳಿಕೆ ರೀತಿಯು.
ಹೆರವರ ಹಳಿಯುವುದೇತಕೆ ? ಇಂದಿನ ಈ ಹಣೆಬರೆಹದಲಿ
ಈ ನಾಡಿನ ಶತಶತಕದ ಚರಿತೆಯು ಬರೆದಿದೆ ಧಾಳದಲಿ
ಇನ್ನಾದರು ಏನಾಯಿತು ? ಎಲ್ಲರ ನಲುಮೆಯ ನೋಂಪಿಯದು
ನಮ್ಮಲಿ ನೆಲಸಲು ದೊರೆತುದು ಉಳಿವುದು, ಉಳಿದುದು ದೊರೆಯುವುದು
ನಾಡಿಗತನವನು ದಿನವೂ ನಾವ್ ನಡೆನುಡಿಯಲಿ ತೋರಲು
ಒಡೆದಿಹ ನಾಡೂ ಒಂದಾದೀತೊಲವಿನ ಬಲಸಾರಲು
ಸ್ವತಂತ್ರರಾದರು ನಮ್ಮಾದರ್ಶಕೆ ನಾವ್‌ಪರತಂತ್ರರು
ಸ್ವಾತಂತ್ರ್ಯದ ಸಿದ್ಧಿಯು ಈ ಹೊಸ ಪರತಂತ್ರದ ಉಸಿರು.

# ನೆನಕೆ

ನಿಮ್ಮಯ ಪದಕೆ ಎದೆದುಂಬಿದ ನೆನಕೆ !
ಹಿಂದಿನಿಂದಿನಾ ಸ್ವಾತಂತ್ರ್ಯವೀರರೆ ॥ ಪ ॥

ಮೊದಲೆದ್ದಿಹ ಬಂಡಾಯದ ಬಂಟರೆ
ಕ್ರಾಂತಿಯ ಕಾಳಿಯನೂದಿದ ಯೋಧರೆ
ಸ್ವರಾಜ್ಯಮಂತ್ರವ ಸಾರಿದ ತಿಲಕರೆ
ನಿರ್ಭಯ ತ್ಯಾಗದ ಯಾಗದಿ ಮುಡಿಪಿದರೆ. ೧

ಸತ್ಯ ಅಹಿಂಸೆಯ ದರ್ಶನಬಲದಲಿ
ಬಿಡುಗಡೆ ಪಡೆದಿಹ ಪ್ರಾಜ್ಞ ಮಹಾತ್ಮರೆ
ಅಝಾದ ಸೈನ್ಯದ ಅದ್ಭುತ ಸಾಹಸದಿ
ಹಗೆಯನು ನಡುಗಿಸಿ ಗುಡುಗಿದ ಸುಭಾಷರೆ. ೨

ಸೆರೆಯಲಿ ಕೊಳೆಯುತ ಗಲ್ಲಿಗೆ ಏರಿ
ಹರಣವ ಹುಲ್ಲೆನೆ ಗಾಳಿಗೆ ತೂರಿ
ನಮ್ಮಯ ಉಡಿಯಲಿ ನಾಡನು ನೀಡುತ
ನೆನಹಿನ ಚಿರಮಂದಿರದಲಿ ನಿಂದವರೆ. ೩

ಭಾರತಮುಕ್ತಿಯ ಸಮರದಿ ಧುಮುಕಿದ
ಕನ್ನಡ ಕುಲದಾ ಹಿರಿಯರೆ ಕಿರಿಯರೆ
ನಿಮ್ಮಯ ಸೇವೆಯು ಸಾಹಸವು ಮರಣವು
ಕಣ್ದೆರೆಯುವ ಹೊಸ ನಾಡಿಗೆ ಸ್ಫುರಣವು. ೪

# ನಮನ

ನಮನವ ಮಾಡುವ ನಮ್ಮಯ ಧ್ವಜಕೆ ।
ಮೂರ್ತತೇಜಕೆ ।
ಸ್ವತಂತ್ರ ಭಾರತ ನವಸಂಕೇತಕೆ ॥ ಪ ॥

ಪರಕೀಯರು ಪರಮಾವಧಿಯಾಗಿಯೆ
ಶತಶತಮಾನದಿ ಬಿಗಿದ ಪಾಶವನು
ತರಿದೊಗೆದು ತಾನೆತಾನಾಗಿ ಮೆರೆವ
ನಾಡಬಲದ ಚೆಲುವೇರಿದ ಕುರುಹಿಗೆ. ೧

ಬಣ್ಣಬಣ್ಣದ ಜನಮನಗಣವನು
ತನ್ನಡಿಯಲಿ ಒಂದಾಗಲು ಕರೆಯುತ
ನೆಲದಲಿ ನೆಲಸಿಯು ಮುಗಿಲಲಿ ಮೀರುವ
ಮೂವಣ್ಣದ ಸೊಬಗಿನ ಆಗರಕೆ ೨

ಸ್ವತ್ವದ ರಕ್ಷಣೆ ತತ್ವದ ಚಿಂತನೆ
ಸಹನೆಯ ಸಮರಸಧರ್ಮದ ಪಾಲನೆ
ಎಂಬುವ ನಾಡಿನ ನಾಡಿಯ ಮಿಡಿತವ
ಸಾರುವ ಧರ್ಮದ ಚಕ್ರದ ಚರಣಕೆ. ೩

# ನವಯುಗದ ರವಿ

( ೨೬ ಜನವರಿ ೧೯೫೦ ಪ್ರಜಾಸತ್ತಾತ್ಮಕ ಸ್ವತಂತ್ರ ಭಾರತ ದಿನದ
ಸಂದರ್ಭವನ್ನು ನೆನೆದು ಬರೆದುದು )

ನವಯುಗದ ರವಿಯಿಂದು ಮೂಡಣದಿ ಮೂಡುತಿಹನು
ಮಲಗಿರುವ ಜನಮನದ ಕತ್ತಲೆಯ ದೂಡುತಿಹನು.
ಚಿಮ್ಮುತಿದೆ ದಿಸೆದಿಸೆಗೆ ಬಿಡುಗಡೆಯ ಚೆಲುಬೆಳಕು
ಜಾರುತಿದೆ ಕಾರಿರುಳ ಕುರುಡು ಕಿರುಮನದ ಕೊಳಕು.
ಇದಕಾಗಿ ತಪಿಸಿದೆವು ಯುಗಯುಗದಿ ಜಪಿಸಿದೆವು
ಇದಕಾಗಿ ಯಮಲೋಕಯಾತನೆಯ ಸಹಿಸಿದೆವು
ಪರವಶರಡಿಘಾಸಿಯಲಿ ಹುಳವಾಗಿ ಹೊರಳಿದೆವು
ಸಿಡಿಲಾಗಿ ಸಿಡಿದೆದ್ದು ಸಂಗರಕೆ ತೆರಳಿದೆವು
ವೀರಧೀರರ ಜೀವರಸಹಿಂಡಿ ಹೊರಚೆಗೆದು
ಕೆನ್ನೀರ ಕಣ್ಣೀರ ಧಾರೆಯನು ಎರೆದೆರೆದು
ಕಾದಿದೆವು ಕುದಿಕುದಿದು ಬಿಡುಗಡೆಯ ಪಾಕಕಾಗಿ
ಇಂದಿನೀ ಅಮೃತಯೋಗದ ಸುಧೆಯ ಸೌಖ್ಯಕಾಗಿ.

:

ಮೂಡಿತೀ ರವಿ ಹಿಂದೆ ಋಷಿಯೆದೆಯ ಗವಿಯಲ್ಲಿ
' ಏಧಿ ಮೇಏಧಿ ' ಎನೆ ಅಲ್ಲಿಂದ ಕವಿಯಲ್ಲಿ
ಇದರ ಬೆಳಕಿನ ಬೀಸು-ಕಿರಣ ತಪ್ಪಿತು ತೂರಿ
ಬರಿಯ ಭಾರತವೇಕೆ ವಿಶ್ವವನ್ನೇ ಸಾರಿ.
ಬಾಳ ಬೆಳಗಿದರಿವರ ಹಿನ್ನೋಟ ನೆರಳಿನಲಿ
ಅರಸುಗಳು ತವಸಿಗಳು ಸಮರಸದ ತಿರುಳಿನಲಿ.
ಜನಜನದ ದಿನದಿನದ ಬದುಕಿನಲಿ ನೆರೆಬೆರೆತು
ಮಿಣುಕಿತಿದು ತರತರದ ದೀಪವಾಗಿಯೆ ನಿಂತು.
ಸೆರೆಯಂಧಕಾರದಲಿ ಮರೆಯಾದ ತೆರನಾಗಿ

ಮರಳಿ ಮೂಡಿಹುದೀಗ ನವಯುಗದ ಕಳೆಯಾಗಿ
ಕಾಲದೆಲ್ಲೆಯದೆಲ್ಲಿ ಎಂಬ ಈ ರವಿಜ್ಯೋತಿ
ಕರೆವ ಜೀವದಿ ಸುರಿವ ನವ ಸುಧಾರಸಪ್ರೀತಿ.
ಕಾಲಮಹಿಮೆಯ ಜಲಧಿ ಮುಕ್ತಭಾರತದಲ್ಲಿ
ಒಳಹೊರಗು ಸೂಸುತಿದೆ ಬೆಳಕುಬೀಜವ ಚೆಲ್ಲಿ
ಒಳಗೆ ಕಾಣದ ಬೆಳಗು ಒಲವುನಲಿವುಗಳಾಗಿ
ಹೊರಗೆ ಬಿಡುಗಡೆಯ ಹೊಳೆ-ಹೊಳೆಯುವಾ ಪರಳಾಗಿ
ದೊರೆತಿಹುದು ತಪಸಿಧಿಯು ಪುಣ್ಯರಾಶಿಯ ಹರವು
ದಿವ್ಯಜೀವನಕಾಗಿ ದೈವಪಿತ್ತಿಹ ವರವು.

* * *

ಮುಸುಕಿಹವು ಈ ರವಿಯ ಹಿರಿಯ ಕಾರ್ಮೋಡಗಳು
ಬೀಸುತಿವೆ ಬಿರುಸಾಗಿ ಕಿಡುಗಾಲಗಾಳಿಗಳು.
ದೊರೆತ ಬೆಳಕನು ಹಳಿದು ಪಡೆದ ಹರಳನು ತುಳಿದು
ವರವ ಶಾಪವಗೈದು ನಾವಿಹೆವು ತಿಳಿವು ಅಳಿದು.
ಮೋಹಿನಿಯ ರೂಪವನು ತಳೆದ ಪರತತ್ವದಂತೆ
ಬಿಡುಗಡೆಯು ನಿಂದಿರಲು ಬೆಡಗಿನಲಿ ನಮ್ಮ ಮುಂತೆ
ಭಸ್ಮಾಸುರನ ತೆರದಿ ಕುಣಿ-ಕುಣಿದು ಮರುಳಾಗಿ
ನಮ್ಮನಾವೇ ನಾಶಗೊಳಿಸುವೆವು ಭಸ್ಮವಾಗಿ.
ಭಯವೇಕೆ ? ಕಾಣುತಿದೆ ಎಚ್ಚರದ ಕೈಯೊಂದು,
ನವಯುಗದ ಅಭಯವನು ನೀಡುತಿಹ ಕೈಯೊಂದು.
ಒಂದೊಂದು ಜೀವನವು ಇದನರಿತು ಬಾಳಿದಂತೆ
ಬೆಳಗುವನು ರವಿ ಕವಿದ ಮೋಡಗಳ ತೂಳಿದಂತೆ.

# ಮಾನವದೇವ

(ಮುಕ್ತ ಛಂದದಲ್ಲಿ)

೧

ಈ ಯುಗದ ಹಾಳು ಮಸಣದಲ್ಲಿ ಕಾಳಕತ್ತಲೆಯಲ್ಲಿ
ಮೋಹನದೀಪ್ತಿಯಾಗಿ ಬಾಳಿನ ಕೀರ್ತಿಯಾಗಿ
ದೇವಮಾನವನಿಳಿದು ಬಂದು ಬೆಳಗಿದ—
ಮಾನವದೇವನಾಗಿ ಇಂದು ತೆರಳಿದ.
ಏನವನ ಚರಿತೆಯ ಹರವು! ನಡೆಸಿನ ಬಿರುಸು!
ಎಲ್ಲರಂತೆ ಮಾನವನಾಗಿ ಎಲ್ಲರಿಂದ ಮೇಲಾಗಿ
ಜೀವನದ ಜಂಜಡದಲ್ಲಿ ಕಲಿಯಾಗಿ ಮುನಿಯಾಗಿ
ಬದುಕುವುದು ಹೇಗೆಂಬ ಶತ-ಶತಮಾನದ
ನಿಜಮಾನವನ ಕನಸನ್ನು ನನಸಾಗಿಸಿದ,
ಪವಾಡಗಳ ಮೆರೆಯದ ಯುಗಪುರುಷನಾಗಿ
ಬಾಳಿದ ಚಣಚಣವನೂ ಪವಾಡವೆನಿಸಿದ.
ದ್ವಾರಕೆಯ ಬಳಿಯ ಮೂಡಣ ಮುನ್ನೀರ
ತೀರದೊಂದು ತಾಣದಲ್ಲಿ ಜನ್ಮವನು ತಾಳಿದನು
ನವಯುಗದ ಗೀತೆಯನು ಸಾರಿದ ಈ ಭಾರತದ ಸಾರಥಿ.
ಸಾಮಾನ್ಯ, ಅತಿಸಾಮಾನ್ಯ ಮಗುವಾಗಿ ಬೆಳೆದು
ಎಳಹರಯದಲಿ ಒಬ್ಬ ಬಾಲಿಕೆಯ ಕೈಗೆ ಕಂಕಣಕಟ್ಟಿ,
ಎಲ್ಲರಂತೆ ವೈಸುಖದ ಮೃಗಜಲವ ಬೆಂಬತ್ತಿ
ಹೊಸ ವಿದ್ಯೆಯನು ಕಲಿತು ಹೊಟ್ಟೆಪಾಡಿಗೆ ತೊಳಲಿ
ಎಲ್ಲರಂತೆಯೆ ನರಮನುಜನಾಗಿ ಬದುಕಿರಲು—
ಕಪ್ಪುಖಂಡದಲಿ ಬಿಳಿಜನದ ಕಣ್ಕುರುಡು ಕತ್ತಲೆಯಲ್ಲಿ
ಕರಿಜನವ ಕೀಳೆಣಿಸಿ ಕಾಲ್ಕೆಳಗೆ ತುಳಿವ ಮನುಜ ಕಾಡಿನಲ್ಲಿ
ಕಡಲಿನಾಳದಿಂದೆದ್ದ ವೇದಪುರುಷನ ಹಾಗೆ

ಇವನಂತರಾಳದಲೊರಗಿದ ದೇವಮಾನವನಂದು ಜಾಗೃತನಾದ,
ಹೊರಬಂದ,
ಒಬ್ಬನಾದರು ಸರಿ ಹೊರಟನಿವನು ತಿಳಿಗೇಡಿತನದೊಡನೆ ಹೋರಾಟಕೆ,
ತಮದ ವೈರಿಯನು ಸತ್ವದಸ್ತ್ರದಿಂದ ಗೆಲ್ಲಲಿಕೆ
ಸತ್ಯಾಗ್ರಹದ ಹೊಸ ಚಕ್ರವನು ಹಿಡಿದು ತನ್ನ ನಾಡಿಗೆ ಮರಳಿ ಬಂದ,
ಬಂಧನದಿ ಬಳಲುವ, ಬಡತನದಿ ನರಳುವ ಬಂಧುಗಳ ಕಂಡು ನೊಂದ, ಬೆಂದ,
ಅವರೆ ತಾನಾಗಿ ತನ್ನದೆಲ್ಲವು ಅವರದಾಗಿ
ತಾದಾತ್ಮ್ಯಮೂರ್ತಿ ಮಹಾತ್ಮ ಸೇವೆಗೆ ನಿಸ್ಪೃಹನಾಗಿ ನಿಂದ.
ಎಲ್ಲ ಬೇನೆಗೆ ಸ್ವರಾಜ್ಯವೆ ಮದ್ದು,
ಶಸ್ತ್ರವಿಲ್ಲದೆಯೆ ಸ್ವಾತಂತ್ರ್ಯವ ಗೆದ್ದು ತೋರುವೆನೆಂದು ಸಾರಿದ.
ನಾಡಿನ ಮೂಲೆಮೂಲೆಗೂ ಸಂಚರಿಸಿ ತನ್ನ ಬೀಜ-ಮಂತ್ರವ ತೂರಿದ.
ಹೀಯಾಳಿಸಿತು ತಿಳಿವುಳ್ಳರೆಂದು ಸೊರಹುವ ತಿಳಿಗೇಡಿ ಜನ.
ಆಳರಸರ ತೆರವಾಯಿ ಅಟ್ಟಹಾಸದ ಅಟ್ಟವನು ರಚಿಸಿ ಕುಣಿದಾಡಿತು.
ತೋಪುಗುಂಡುಗಳ ಸಕಲ ಸನ್ನಾಹಗಳ ಕೆಮ್ಮೊಗದ ಸೈನಿಕರ ಬಲವುಳ್ಳ
ಸಾಮ್ರಾಜ್ಯವೆಲ್ಲಿ,
ಗಾಳಿಗೆ ಹಾರಿ ಹೋಗುವ ಈ ತೆಳುಸ್ಪ್ರಯ ಹುಲುಬಲದ ಮರುಳನೆಲ್ಲಿ !
ಹುಲುಬಲ ! ಆಪನೆ ತೋರಿದನೀತ
ಪ್ರಚಂಡ ಪ್ರಭಂಜನ ಸಮಾನವಾದ ಸಾಮ್ರಾಜ್ಯ–ಸಾಮರ್ಥ್ಯಕೆ.
ಮದ್ದಾನೆಯಂತೆ ತೊತ್ತಳದುಳಿದು ಮಣ್ಣುಮುಕ್ಕಿಸಿ
ತಾನೆ ಮೇಲೆಂದು ಮೆರೆಯುವ ಮಾದರ್ಪಕೆ
ಹುಲ್ಲುಕಡ್ಡಿಯು ಬಲದ ಮೇಲ್ಮೆಯನು ತೋರಿಸಿದ.
ನೆಲಕೆ ಬಿದ್ದು ಹುಡಿಯಲಿ ಹೊರಳಿದ ಆ ಹುಲ್ಲುಕಡ್ಡಿ
ತನ್ನೊಳದ ತೇಜವು ಚಿಮ್ಮಿ ನೇಟಾಗಿ ಸೆಡೆದು ನಿಂತು
ಹಸಿರುಹರೆಯವನು ಸೂಸಿ ಸಾವಿಗೆ ನಗುವ ನಗೆಹೂವನರಳಿಸಿ
ಮಣಿಯದಾತ್ಮದ ಮೂರ್ತಿಯಾಗಿ ತುಳಿದಂತೆ ಕಳೆಗೊಂಡು
ಮದ್ದಾನೆಯನು ಸೋಲಿಸಿತು, ಅದರ ಮನಕರಗಿಸಿತು,
ಹೊಸಯುಗದ ಅದ್ಭುತಗಳನು ಮೆರೆಯಿಸಿತು.

ಹುಲುಮಾನವಗೆ ಬೆಲೆ ತಂದು, ಹುಲ್ಲು ಸಹ ದೇವನಿಲ್ಲದೆ ಅಲುಗದು ಎಂದು
ಹುಲ್ಲಿನಲಿ ಮನುಜನಲಿ ನಿಂತ ಪರಮತತ್ತ್ವದ ದರ್ಶನದಿ
ಸಕಲಮಾನವ್ಯದ ಅಕ್ಕರೆಯೆ ಜೀವದುಸಿರಾಗಿ
ಕೀಳು ಮೇಲೆಂಬ ಕೊಳೆಯ ಕಿತ್ತೊಗೆದು, ಸೇವೆಯಲಿ ಜೀವ ತೇಯುತ್ತ
ಮಾನವತೆಯ ಮಾನಸ್ತಂಭವಾದ ಮೋಹನದಾಸ!
ಬಿಡುಗಡೆಯ ಬವರಗಳ ಕಾಲಕಾಲಕೆ ಹೂಡಿ
ಜನಜಂಗುಳಿಯ ತನ್ನ ನೆರಳಂತೆ ನಡಸಿ
ತ್ಯಾಗವನು ಧೈರ್ಯವನು ಸ್ವಾಭಿಮಾನವನು ತುಂಬಿ
ಸೋಲಿನಲಿ ಕುಗ್ಗದೆಯೆ ತನ್ನ ತತ್ವವನು ನಂಬಿ ಮುನ್ನಡೆದ.
ಒಲಿದು ಬಂದಳು ಸ್ವಾತಂತ್ರ್ಯದೇವಿ ರಕ್ತರಂಜಿತಳಾಗಿ. ದುಃಖಭಂಜಿತಳಾಗಿ.
ಕಳವಳದಿ ಕೂಗಿದನು, ಕೈಮುಗಿದು ಬಾಗಿದನು,
ಆದರವನ ಬೋಧೆಯನು ಮಸಣಕೆ ಅಟ್ಟಿ ಎದೆತಪ್ಪಿ
ಹಗೆಯ ದಳ್ಳುರಿ ಹತ್ತುಕಡೆ ನಾಲಗೆಯ ಚಾಚಿ
ರಕ್ಕಸತನದಿ ಮೀರಿತು ಪುರಾಣ-ಕಥೆಗಳನು.
ಒಡೆದು ಹೋಳಾದ ನಾಡಿನ ಸಿಡಿದು ಹಾಳಾದ ಹೃದಯಗಳ,
ಸುಟ್ಟ ಮನೆ, ಬಿದ್ದ ಹೆಣಗಳ ಮಧ್ಯದಲಿ
ಬಿಡುಗಡೆ ತನ್ನ ಸಂಭ್ರಮದ ಗೀತವನು ಹಾಡಿಕೊಂಡಿತು :
ಸಿದ್ಧಿಯ ಸುಖ, ಸೋಲಿನ ದುಃಖ ಎರಡನೂ ತೋಡಿಕೊಂಡಿತು.

೨

ಗಾಂಧಿ ಮಹಾತ್ಮ! ಭಾರತದಾತ್ಮ!
ಪುಣ್ಯಭೂಮಿಯ ಪುಣ್ಯಮೂರ್ತಿ! ಕರ್ಮಭೂಮಿಯ ಕರ್ಮಯೋಗಿ!
ಭಾರತದ ಸಂಸ್ಕೃತಿಯ ಎತ್ತರವನರಿತರಿತು
ನಿನ್ನ ನಡೆ-ನುಡಿಯಲ್ಲಿ ಬಿತ್ತರಿಸಿ ತಲೆಯಲ್ಲಿ ಹೊತ್ತಿರಿಸಿ
ಸಾರುವ ಕಾಯಕದವನಾಗಿ ಬಂದ ಕಾರಣಿಕ!
ಸತ್ಯ-ಅಹಿಂಸೆಯ ಪ್ರೇಮ-ಸಹನೆಗಳ ಮಂತ್ರವಿಹ
ಯುಗ ಯುಗದ ಜಾಣ್ಮೆಯನು ದಿನದಿನದ ಬಾಳಿನಲಿ

ಚಲದಿಂದ ಒಲವಿಂದ ಮೂಡಿಸಬಂದ ಸಾಹಸಿಗ!
ಸರ್ವೋದಯದ ಸರ್ವಾಂಶಸ ಸಮಾಜದರ್ಶನದಿ
ಕಲಿಯುಗದಲ್ಲಿ ರಾಮರಾಜ್ಯವ ನೆಲಸ ಬಯಸಿ
ನೆಲದಲ್ಲಿ ಕಾಲೂರಿ ಮುಗಿಲನ್ನು ಮುದ್ದಿಡಲು
ವೀಳ್ಯವೆತ್ತಿದ ಹೊಸ ಮನ್ವಂತರದ ಮಹಾವೀರ!
ಕೊನೆವರೆಗೂ ಮಾನವನಾಗಿಯೆ ಉಳಿದು
ಮಾನವತೆಯ ತಿರುಳಾದ ದಿವ್ಯತೆಗೆ ಕೈಚಾಚಿದ ಮಹಾಮಹಿಮ!
ನಿನ್ನ ವ್ಯಕ್ತಿಮತ್ವಕೆ ಗೆಲವಾಯಿತು, ನಿನ್ನ ತತ್ವಕೆ ಗೆಲವಾಯಿತೇ ?
ನಿನ್ನೆತ್ತರಕೆ ಜನ ಏರಿತೇ ಆದರ್ಶದಾಗಸದಿ?
ಕಾಲದಂಗಣದಲ್ಲಿ ನೀನಿಟ್ಟ ಹೆಜ್ಜೆಯಲಿ
ಹೆಜ್ಜೆಯನಿಟ್ಟು ಸಮರಸವಾಗಿ ನಡೆಯಿತೇ ?
ಎಂಬ ಕೇಳಿಕೆಗೆ ಹಿಗ್ಗಿನಲಿ ಹೊರೆಯೇರಿ ಕುಗ್ಗಿನಲಿ ಮನ ಕಂಗೆಡುವುದು,
'ಬಾಯ್ತುಂಬ ಹೊಗಳಿತು, ಕೈತುಂಬ ತೆಗಳಿತು' ಎಂದು ಸುಮ್ಮಾಲ
ಮರಗುವುದು.

ಜನಕ, ರಾಮ, ಕೃಷ್ಣ, ವಸಿಷ್ಠ, ವಾಲ್ಮೀಕಿ ಮೊದಲಾದ
ರಾಜರ್ಷಿ-ಮಹರ್ಷಿಗಳ ಜೀವಸೂರ್ಯರಲಿ ಬೆಳಗಿದ
ಜ್ಯೋತಿಯನು ಎಲ್ಲ ಜೀವಜಂತುಗಳಲ್ಲಿ ಹೊತ್ತಿಸುವೆ-
ನೆಲ್ಲ ಕಾರ್ಯಗಳಲ್ಲಿ ಬಿತ್ತರಿಸಿ ತೋರಿಸುವೆ-
ನೆಂಬ ನಿನ್ನಯ ಹಿರಿಯ ನೋಂಪಿ ಗೆಲವಿನಲಿ ಸಫಲ, ಸೋಲಿನಲಿ ವಿಫಲ,
ವಿಫಲವೆಂಬ ಸೋಲಿನ ಸೋಂಕಿಲ್ಲದೆ ಮೆರೆದುದಕೆ ಎಂದಿಗೂ ಸಫಲ
ಕಾಲ್ತೆಗೆಯಬಾರದಂಥ ಸ್ವನಿರ್ಮಾಣ ನರಕದಲ್ಲಿಯೆ
ಬಿದ್ದು ಹೊರಳುವ ಮಾನವತೆ, ಭಾರತದ ಜನತೆ
ನಿನ್ನ ನಸುಕಿನ ತಂಪು ಬೆಳಕಿನ ಸ್ಪರ್ಶಕೆ
ಕಣ್ದೆರೆಯಿತಾದರೂ ಮಣ್ಣಿನಲಿ ಹೊರಳಾಟ ಬಿಡಲಿಲ್ಲ;
ನಿನ್ನಂತೆ ನಡೆಯುತಿದ್ದರೂ ನಡೆದು ತೋರಿದರೂ
ತಿರುತಿರುಗಿ ತನ್ನ ಪಳಕಿನ ನೆಲೆಯ ಸೇರದಿರಲಿಲ್ಲ.
ರಾಗ-ದ್ವೇಷಗಳ ಸುಳ್ಳು-ಮೋಸಗಳ ಸ್ವಾರ್ಥ-ಸೋಗುಗಳ

ವಿಷಬೀಜ ನೂರು ಸೀಳಿಗೆಯು ಮನುಜಹೃದಯದಿ ಬಿದ್ದು
ಮೊಳೆತು ಮರವಾಗಿ ನಡೆನುಡಿಯು ಹೂವಿನಲಿ
ಕೊಳೆನಾತ ಸೂಸುವ ಗಾಳಿಯಲ್ಲಿ ಬಾಳು ಕೊಳೆತಿರಲು
ಹೊರದೊಗಟೆಯು ಸಭ್ಯತೆ, ಒಳದಿರುಳಿನ ಸಂಸ್ಕೃತಿ ಕಂದುತಿಹವು
ಕಮರುತಿಹವು.

ನಿನ್ನ ತಿಳಿವಿನೆತ್ತರ, ಸರಳತೆ, ಸಾತ್ವಿಕತೆ ಒಂಗ್ಗೈಸೆ ಗೈದರೂ
ನಾಲವೀ ಕೊಳೆಯು ತಿದ್ದಲು ಎಂದು ಸಾರುವುದು ನಿನ್ನ ಜೀವನ ಕಥೆ.
ಸತ್ಯವೇ ದೇವರೆಂದೆ, ಅಹಿಂಸೆಯೆ ಈ ದೇವರನ್ನೊಲಿಸುವ ಮಂತ್ರವೆಂದೆ.
ರಾಜಕೀಯ ರಂಗದಲಿ, ಪ್ರತಿದಿನದ ಇರವಿನಲಿ
ಈ ನಿಲವು ನಿನಗೆ ದೊರೆತರೂ ನೆರೆಯಾಗಿ ನೆರೆಯದಾಯಿತು ಎಂದು
ನಿನ್ನಯ 'ಹಿಮಾಲಯ ಪ್ರಮಾದ' ಗಳನೊಪ್ಪಿದೆ,
ಸೋಲು ನಿನಗೆ, ತತ್ತ್ವಕಲ್ಲ ಎಂದ-ಸುಂದೆ.
ನಿನ್ನ ಹಿರಿಮೆಯು ಗುರುತಗಂಬಪಿದು. ಆದರೇನು ?
ನಿನಗೆ ನೆರೆಯದ ತಿಳಿವು ಜನಜನದಿ ಬರುವುದೆಂತು ?
ಸತ್ಯವನೊಪ್ಪಿಯೂ ಅಸತ್ಯದೊಡನೆ ಒಡಂಬಡವಾಡಿ
ಅದೆ ಬಾಳುವಿಕೆಯು ಕಟುಸತ್ಯವೆಂದು ಬಾಳಿದೆ ಜನ.
ಅಹಿಂಸೆಯ ಹಿರಿಮೆಯ ಹೊಗಳಿ ಹಿಂಸೆಯಲಿ ಉಸಿರಾಡಿ
ತಪ್ಪಿಸಬಾರದುದರಲಿ ತಪ್ಪೇನು ಎನ್ನುತಿದೆ,
ಸಹಜವಾದುದು ಸರಿಯಾದುದೆಂದೊರೆಯುತಿದೆ.
ತಾವು ಹೂಡಿದ್ದ ಹಿಂಸೆ ನಿನ್ನ ಹಿಂಸೆಗೆ ಸಂಮತವೆಂಬ
ಟೊಳ್ಳು ಭ್ರಮೆ ಬಿಡಲಿಲ್ಲ ಬಲ್ಲವರಿಗೂ.
ನಿನ್ನ ಜೀವಿತಕಾಲದಲ್ಲಿ ನಿನ್ನ ಹೆಸರಿಗೆ ಜಯವೆಂದು ಕೂಗಿ ಪಶುವಿಗೂ
ಕೀಳಾಗಿ

ವೈರಿಗಳ ಕೊಲೆಮಾಡಿ ಬಂಧುಗಳ ತರಿತರಿದು
ನಿನ್ನ ಅಣಕಾಟವೆಂಬ ರುದ್ರನಾಟಕವ ಮಾಡಿ ತೋರಿಸಿತು ನಾಡಿನ
ಮರುಳು ಜಂಗುಳಿ.

ನಿನ್ನ ತಪೋಬಲದಿಂದಹಿಂಸೆ ಪ್ರೇಮಮಹಾಮಂತ್ರವಾಗಿ

ಆಗಾಗ ಚಿತ್ತಗಳನೆತ್ತಿತ್ತು, ಪಾಪದಿಂದ ಹೊರಳಿಸಿ ಗೆದ್ದಿತ್ತು,
ನೌಖಾಲಿಯಾತ್ರೆಯಲಿ ತನ್ನ ದಿಗ್ವಿಜಯ ಪಡೆಯಿತು.
ದುರ್ಬಲದೇಶದ ಸಮೂಹ ಶಸ್ತ್ರವಾಗಿ ಯುಕ್ತಿಯಾಗಿ
ದಾಸ್ಯಶೃಂಖಲೆಯ ಸಡಿಲುಗೊಳಿಸಿತು,
ಈ ಶತಮಾನದ ಶಿಖರದಲ್ಲಿ ನಿನ್ನ ಕೀರ್ತಿಧ್ವಜದ ಕಂಬನಿಲ್ಲಿಸಿತು.
ಅಹಿಂಸೆಯ ವೇದದ ಭಾಷ್ಯಕಾರ! ತಲೆಬಾಗಿದೆನು ನಿನಗೆ.
ಆದರೂ ಎಲ್ಲದಕು ನಿನ್ನೆತ್ತರದ ಹಿಂಸೆಯದು ಮದ್ದೇ?
ಅದನು ಬಳಸುವ ಬಲವೆಮಗೆ ಬಹುದೆ?
ಮನುಜಮೌಢ್ಯಕೆ, ಕ್ರೌರ್ಯಕೆ, ಹಗೆತನದ ಕೆಂಗಿಡಿಗೆ
ಯುದ್ಧಗಳ ತಾಂಡವದಿ ರಾಕ್ಷಸರ ಮೀರಿಸುವ ಕೊಲೆಗೆ
ಅಹಿಂಸೆ ತಾರಕವೇ?— ಎಂಬುದಕೆ ಅಹುದು ಅಹುದೆಂಬ
ನಿನ್ನ ಪರಮ ಶ್ರದ್ಧೆಯ ಮರುಮಾತು ಹುರಿದುಂಬಿಸುವುದು,
ಪತಿತ ಪರಿಸರದಲ್ಲಿ ಕೃತಿಗಿಳಿಸೆ ಭಯದುಂಬಿಸುವುದು.
ಹಿಂಸೆಗೆ ಕೊನೆಯಿಲ್ಲ, ಅಹಿಂಸೆಗೆ ಮೊನೆಯಿಲ್ಲ
ಯಾವೊಂದೆ ಯುಕ್ತಿಯಲಿ ಸತ್ವಕ್ಕೆ ಗೆಲುವಿಲ್ಲ, ತಮಕ್ಕೆ ಸೋಲಿಲ್ಲ—
ಎಂದು ಹೇಳುವಂತಿದೆ ಈ ಲೋಕದ ಕರುಣಕಥೆ.

ಯಂತ್ರಯುಗದೊಡನೆ ಹಗಲಿರುಳು ನೀ ಹೋರಾಡಿದೆ;
ಹಳೆಯ ಬದುಕಿನೆಲುಹಂದರದಿ ಹೊಸ ಉಸಿರನೂದಿ
ನಿನ್ನರ್ಥನೀತಿಯೊಂದನು ಸಾರಿದೆ, ಮಾಡಿ ತೋರಿದೆ.
ಅದರ ನೆಲೆಬೆಲೆಯದಕಿಪ್ಪೆಯಾದರೂ
ಅದಕತಿಯ ಮನ್ನಣೆಯಿಂದ ನಾಡ ಮುನ್ನಡೆಗೆ ತಡೆ,
ಗಾಳಿಯೊಡ ಗುದ್ದಾಟವೆಂದರಿಯಬೇಡವೆ?
ಅರಿಯದಿರೆ ನೂರು ಮತಗಳ ಸಂತೆಯಲಿ
ನಿನ್ನನು ಅರೆ ತಿಳಿದ ಅಂಧ ಪೂಜಕರು ಇನ್ನೊಂದು ಮತದಂಗಡಿಯ ಹೂಡಿ
ಲಾಭಹಾನಿಯ ಲೆಕ್ಕಕೆ ನಿಲ್ಲುವರು, ಎಲ್ಲದಕು ಹೆಚ್ಚು ಬೆಲೆ ಬೇಡುವರು.
ಅಂದಿಗಿಂದಿಗೆ ವಿಶ್ವದರ್ಶನಗಳೆಲ್ಲ ಮತಗಿತಗಳಾಗಿ
ಮಾನವನ ಹರಿದು ಹಂಚಿ ಹೋರಾಟಕಿದಿರು ನಿಲ್ಲಿಸಿಹವು,

ತೋರಿಕೆಯ ಮತದೀಕ್ಷೆಯಿಂದಾವನೂ ಪರಿಪೂತನೆಂಬ ಮರುಳರಿವ
ಹರಡಿಸಿಹವು.

ನಿನ್ನ ಕಣ್ಣೆದಿರು ಖಾದಿಬಟ್ಟೆಯ ನಖಶಿಖಾಂತದಿ ಧರಿಸಿ
ನಿನ್ನ ಹೆಸರಿನ ಟೊಪ್ಪಿಗೆಯ ತಲೆಗೇರಿಸಿ
ಹೊರ ದೀಕ್ಷೆಯನು ಪಡೆದು ಪರಮ ಪುನೀತರಾದಂತೆ
ಊರೂರ ಬೀದಿಬೀದಿಯಲಿ ಮೆರೆದಿಹರು
ಹೊಸ ಯುಗದ ದಂಭಕರು, ನಿನ್ನ ತತ್ತ್ವದ ವಿಡಂಬಕರು.
ನಾಥ ತಂದೆ! ನೀನಗೋಚರ ರೂಪದಲಿ ಸುಳಿಸುಳಿದು
ನಿನ್ನ ಮಕ್ಕಳ ಈ ನಿಗಡವನು ಬಿಡಿಸಯ್ಯ!
ನಿನ್ನಂತೆ ಯಾವೊಂದು ಪಿಳ್ಳೆಯು ನಡೆಯದಿದ್ದರು ಸರಿ
ಈ ಕಪಟನಡೆ ಬೇಡವೆಂಬ ಮತಿ ಕಲಿಸಯ್ಯ!

೩

ನಿನ್ನ ಸಾವಿನ ಸುದ್ದಿ ನಂಬಲಾರದ ಗುಂಬವಾಗಿ
ಬರಸಿಡಿಲಲ್ಲ, ಬರಸಿಡಿಲಾಗಿ ಲೋಕವನೆ ಅದುರಿಸಿತು,
ತಿಳಿದ ಹೃದಯಗಳಲ್ಲಿ ಅರಿದಾದ ಭೂಕಂಪವಾಗಿಸಿ
ಅಳಲು ಮುಳಿಸು ಬೆರೆತ ತಪ್ತಲಾವಾರಸದ
ಕಂಬನಿಗಳ ಕಾಳ್ಪುರವ ಹೊರಉಕ್ಕಿಸಿತು.
ಕೇಡು ಬಂತಿನ್ನು ಭೂಮಿಗೆ ಎಂದು ಜನವೆಲ್ಲ
ಶೋಕಕಂದರದಲ್ಲಿ ಉರುಳಿತು, ಹೊರಳಿತು.
ನೇಮನಿಷ್ಠೆಯ ಕಡಿವಾಣದಿಂದ ನೀನಂಕೆಯಲಿಟ್ಟು
ನಡಸಿದ ದೇಹರಥವದು ದೇಶಸೇವೆಯಲಿ
ಸವೆಯದೆ ನಿಲ್ಲದೆ ಸಾಗಿರೆ,
ನಿನಗೆ ಹೊಸಯುಗದ ಚಿರಂಜೀವಿಯ ಪಟ್ಟವನು ಕಟ್ಟಲಿಕೆ
ಏನೊ ಎಂದಿರಲು ಗಕ್ಕನೆಯೆ ಅದು ನಿಂತುದೇಕೆ?—
ವಿಷದ ವಿದ್ಯೆಯ ಕಲಿತ ತಲೆತಿರುಕನೊಬ್ಬನ ಕೈಯ ಕೊಲೆಯಿಂದ!
ನಾಡಿನೆದೆಯನು ಹೊಕ್ಕು ಪ್ರಾಣಶಕ್ತಿಯನು ಹಾರಿಸಿದ

ನಾಣೆಂಬುದನು ದಿಕ್ಕುದಿಕ್ಕಿಗೆ ಎಸೆದ ಗುಂಡಿನಿಂದ!
ಪ್ರಾರ್ಥನೆಯ ಸಭೆಯಲ್ಲಿ ವಂದಿಸಲು ಎನೆ ಬಂದು
ಘಾತಕಿ ಕೊಲೆಪಾತಕಿಯಾದ ದೇಶಬಾಂಧವನೊಬ್ಬ
ಲೋಕಕ್ಕೆ ಗುರುವಾದ ಲೋಕದೆಲ್ಲ ಸಿರಿಗೆ ಸರಿಬೆಲೆಯಾದ
ಜೀವರತ್ನವನು ಕ್ಷಣದಲ್ಲಿ ಮಾಯವಾಗಿಸಿದ,
ಪುಣ್ಯದ ಕಾರ್ಯ ಮಾಡಿದೆನೆಂದು ಭಾವಿಸಿದ!
ಅಹುದು! ಪುಣ್ಯದ ಕಾರ್ಯ ಮಾಡಿದುದೆ ನಿಜ!
ಸತ್ಯಕ್ಕೆ ಸಾಕ್ರೆಟಿಸನು. ಅಹಿಂಸೆಗೆ ಕ್ರಿಸ್ತಪ್ರಭು
ಪ್ರಾಣ ಬಲಿಯಿತ್ತು ಬೆಳಗಿಸಿದ ಮಾನವಚರಿತೆಯ ಹೊತ್ತಗೆಗೆ
ಸತ್ಯ—ಅಹಿಂಸೆಗಳೆರಡರೊಳಗದಿ ಮುಡುಪಿಟ್ಟ
ನಿನ್ನ ಚರಿತೆಯು ಚಿನ್ನದ ಪುಟಗಳನು ಸೇರಿಸಿದ!
'ವೈರಿಯನೂ ಪ್ರೀತಿಸು' ಎಂಬ ನಿನ್ನ ದರ್ಶನವನ್ನು
ಒರೆಗೆ ಹಚ್ಚಲಿನೆ ಹೊರಟು ನಾಡ ಕೀರ್ತಿಗೆ ಮಸಿ ಹಚ್ಚಿ,
ಭಾರತವೈರಿ ನೀನೆಂಬ ಮೂಢಭಾವದ ಸುಳಿಗೆ ಸಿಕ್ಕು
ಮೃತ್ಯುವಿನ ಕೈಯ ಪಾಶವಾದ,
ಅತಿಮೂಢ ಮಾನವನ ತಿಳಿವಿಗೂ ಕೀಳ್ತರದ ಅಪಹಾಸವಾಗ!
ಅವನೊಬ್ಬನೇ ನಿನ್ನ ಕೊಲೆಸಂಚುಗಾರನಾದವನು?
ಅಜಾತ-ಶತ್ರುವಾದ ನಿನ್ನೆತ್ತರದ ನೆಲೆಯರಿವು—ಇರವುಗಳ
ಮಾತು-ಕೃತಿಗಳನೊಪ್ಪದೆಯೆ ಮೂದಲಿಸಿ, ನಿನ್ನ ವಿಕೃತಿಯಲ್ಲಿ,
ದ್ವೇಷದಲಿ ಸಂತಸಪಡುವ ದೇಶಬಂಧುಗಳೇನೂ ಜನ
ಅವನ ಕೊಲೆಕುಣಿತಕ್ಕೆ ಹಿಮ್ಮೇಳದವರಾಗಿ ಬಾಳಿಹರು,
ನಿನ್ನ ತತ್ತ್ವವು ದೇಶಘಾತಕವೆಂಬ ಭಾವನೆಯ ತಾಳಿಹರು.
ಅದೇಕೆ, ನಿನ್ನ ದಾರಿಯಲಿ ನಡೆವುದು ಮೇಲು, ಆದರತಿ ಕಠಿಣವೆಂದು
ನಂನಮ್ಮ ದಾರಿಯಲಿ ನಡೆಯುತಿಹ ನಾವೆಲ್ಲ
ಹೆಸರ ಅನುಯಾಯಿಗಳು, ಮಾತಿನ ಶೂರ-ಧೀರರು
ನಿನ್ನ ಮರಣಕ್ಕೆ ಕಾರಣರು, ರಾಷ್ಟ್ರಕ್ಕೆ ಮಾರಣರು.
ನೀನು ಸಹ-ಕ್ಷಮಿಸು ಯುಗಪುರುಷ-ಹಲವು ಸಲ

ನಿನ್ನ ಸಾತ್ವಿಕ ರಾಜಕಾರಣದ ವ್ಯವಹಾರ ಚ್ಯುತಿಗಳಿಂದ
ಅಹಿಂಸೆಯ ನಿಲುಮೆಯಲಿ ಹಿಂಸಕರಿಗೆ ನೀಡಿದ ಬಲದಿಂದ
ಉಪೋಷಣೆಗಳ ಉಪಾಯಗಳ ಮಾಡಿ ಪಡೆದ ಬಲುಮೆಯ ಗೆಲವಿಂದ
ನೈತಿಕ ಪತನ ಹೊಂದಿದ ಜಗದಿ ನಿನ್ನ ನೆಲೆಯರಿಯದ
ಮೂಢರಿಗೆ ಅನುವಿತ್ತು ನಿನ್ನ ಮರಣಕೆ ಕಾರಣನಾದೆಯ ?
ಕೊನೆಯ ಸತ್ಯ ಕೊನೆವರೆಗು ತಿಳಿಯದು. ಕಾರಣವೇನೆ ಇರಲಿ,
ಲೋಕಕಾರಣನು ತನ್ನ ನಂಬಿದ ಹಿರಿಯ ಭಕ್ತನನು
ಭಾರತದ ಸೇವೆಗೆ, ಲೋಕದ ಶಾಂತಿಗೆ ಯಾಕೆ ಬದುಕಿಸದಾದ ?
ಸಾವ ಮಾಡಿದ ದೊರೆಯು ಸಾವ ಮಾಣಿಸದಾದನೇ ?
ಹಲವು ಸಲ ಸಾವಿನ ಪಕ್ಕುಳಿಯಿಂದ ನಿನ್ನುಳಿಸಿದವನು
ಈ ಸಲವೇಕೆ ಅವರ ಉರಿನಾಲಗೆಗೆ ದಾರಿಮಾಡಿದನು ?
ಅವನ ಕರುಣೆಗಿಂತಲು ಸತ್ಯಸಂಕಲ್ಪವು ಮೇಲೇ ?
ಯಾರು ಬಲ್ಲರು ?
ಪೂರ್ಣತೆಯ ಪಥದಲ್ಲಿ ಲೋಕಜೀವನವ ಯುಗ-ಯುಗದಿಂದ ಒಯ್ಯುತಿಹ
ಆ ಮಹಾತಾಯಿ
ಹೊಸದಾದ ಕೊಳಲಿಂದ ತನ್ನ ಇಂಚರವ ಹರಿಯಿಸಿ,
ಹೊಸ ಕೈಯಿಂದ ಮನಗಳ ಮನೆ ಕಟ್ಟಿಸಿ
ಮುಂಬರಿಯಲೆಂಬ ಹಂಬಲನು ಪಡೆದು
‘ ನಿನ್ನ ಸೇವೆ ಸಂದಿತು, ಯುಗ ಮುಗಿಯಿತು ’ ಎಂದು ಸಾರಿದಳೆ
ಅದೇನೆ ಇರಲಿ ತಿಳಿವಿನಾಚೆಯ ತಿಳಿವು,
ನಿನ್ನ ಜೀವನದಂತೆ ನಿನ್ನ ಮರಣದಲ್ಲಿಯೂ
ನೀ ನಿಜಮಾನವನಾದೆ, ಅಂತೆ ದೇವನಾದೆ,
ಸಾವಿಗಂಜದ ಧೀರನೆಂಬುದನು ನಿಜಗೊಳಿಸಿ ತೋರಿದೆ.
ಸಾವು ಸತ್ತಿತೇ ? ಇಲ್ಲ ಗೆದ್ದಿತು— ಆದರೇನನ್ನು ?
ಮಣ್ಣಿನ ಮನೆಯನ್ನು, ಉಸಿರಿನ ಬೊಂಬೆಯನ್ನು.
ನಿನ್ನಜೇಯವಾದ ಮನ, ಅಮರವಾದ ಆತ್ಮ
ಅದನಿದಿರಿಸಿ ಅದನೆ ಸೋಲಿಸಿ ಆಚೆ ಸರಿಸಿ

ಗೆಲವುನಗೆ ಬೀರುತ್ತ ರೆಕ್ಕೆಯನು ಬೀಸಿ ಹಾರುತ್ತ
ಅನಂತತೆಯ ಆಗಸದಿ ಲೀನವಾದುವು!
ಇಂಥ ನಿನ್ನಯ ಮರಣ ಚಿರ ನವೀನ ಸ್ಫುರಣ!
ಇದಕೆ ಶೋಕಿಸುವವನು ದುರ್ಬಲತೆಗೆ ಶರಣ!
ದಾಸ್ಯಕ್ಕೆ ಮುದುರಿ ಹೆರವರ ಕಾಲ್ಕೆಳಗೆ ಅದುರಿ
ಸಾವಿಗೆ ಬೆದರಿ ಹೆಂಬೇಡಿಗಳಾದ ನಿನ್ನ ನಾಡಿಗರಿಗೆ
ನಿನ್ನಂಥ ಬಾಳನ್ನು ನಿನ್ನಂಥ ಸಾವನ್ನು ಕರುಣಿಸಯ್ಯ,
ಮರ್ತ್ಯದಲಿ ಅಮೃತರಸಧಾರೆಯನು ಹರಿಯಿಸಯ್ಯ!

೪

ಸ್ವತಂತ್ರ ಭಾರತ ನಿರ್ಮಾತ! ರಾಷ್ಟ್ರಪಿತ! ಶಾಂತಿದೂತ!
ನಿನ್ನಲ್ಲಿ ನಮ್ಮ ಗೌರವದ ನೆನಕೆಯ ನನೆಕೊನೆಯ ಸಲ್ಲಿಸಲು
ನಿನ್ನ ಮಸಣಯಾತ್ರೆಯನು ಮಾಪೆಂಪಿಂದೆ ಮಾಡಿದೆವು,
ಹೂಸರದಿಂದ ನಿನ್ನ ಮೈಮುಚ್ಚಿದೆವು, ಸೊಚ್ಚಿದೆವು,
ಜಯಘೋಷದ ಮೊಳಗಿನಿಂದ ದಿಕ್ತಟವ ಗಡಚಿಕ್ಕಿಸಿದೆವು,
ರಾಮನಾಮದ ನೆನಪಿನಿಂದ ಗಾಳಿಯಲೆಗೂ ಹುಚ್ಚುಹಿಡಿಸಿದೆವು,
ಶೋಕದ ನೆಲೆಯಿಂತು ಪುಣ್ಯಸ್ಮರಣೆಯ ವೈಭವದ ಲೋಕವಾಯ್ತು,
ನಾಡಿಗೆ ನಾಡೇ ದುಃಖದಲಿ ಧ್ಯಾನದಲಿ ಏಕವಾಯ್ತು.
ಚಂದನದಂತೆ ಆಳರಸರ ಕಲ್ಮನದ ಸಾಣೆಕಲ್ಲಿನಲಿ
ನಮ್ಮ ಹೃದಯಶಿಲೆಗಳಲಿ ನಿನ್ನ ಬಾಳನು ತಿಕ್ಕಿತಿಕ್ಕಿ
ದಿನದಿನವು ಸವೆಯಿಸುವ ಸುಗಂಧವನು ಸೂಸಿದ ನಿನ್ನನು
ಚಂದನದ ಚಿತೆಯಲ್ಲಿ ಅಗ್ನಿದೇವನಿಗರ್ಪಿಸಿದೆವು,
ಕಂಬನಿಯ ಕೊನೆಗಾಣಿಕೆಯಲಿ ತರ್ಪಿಸಿದೆವು.
ನಿನ್ನಸ್ಥಿಶೇಷವನು ಗಂಗೆ ಜಮುನೆಯ ಸಂಗಮದಲ್ಲಿ
ಮೆರವಣಿಗೆಯಿಂದೊಯ್ದು ಜಲದೇವಿಗೊಪ್ಪಿಸಿದೆವು;
ನಾಡಿನೆಲ್ಲ ಪುಣ್ಯನದಿಗಳಲ್ಲಿ ಪಾವನಕ್ಷೇತ್ರಗಳಲ್ಲಿ
ನಿನ್ನ ಚಿತಾಭಸ್ಮವನು ಪುಣ್ಯನಿಧಿಯಾಗಿ ಕಾಯಿರೆಂದು

ನಿತ್ಯಪ್ರೇರಕವಾಗಿ ತೋರಿರೆಂದು ವಿಸರ್ಜಿಸಿದೆವು.
ನಮ್ಮ ಸಂಸ್ಕೃತಿಯ ಸತ್ವಶುದ್ಧಿಯ ಧವಲಕೀರ್ತಿಯನು
ಸಾರುತ್ತ ನಿಂತ ಹಿಮಪರ್ವತದಲ್ಲಿ ಮೆರೆಯುವಾ
ಮಾನಸಸರೋವರದಲ್ಲಿ ಗಂಗೋತ್ರಿಯಲಿ
ನಿನ್ನ ರಕ್ಷೆಯನು ಎತ್ತರದ ಕುರುಹೆಂದು ಇಳಿಬಿಟ್ಟೆವು.
ಎಲ್ಲವನು ಮಾಡಿದೆವು, ಎಲ್ಲವನು ಮಾಡಿದೆವು. ಆದರೆ–ಆದರೆ–
ನಮ್ಮ ರಕ್ತವಾಹಿನಿಗಳಲಿ ಚಿತ್ತಭಾವನೆಗಳಲಿ
ನಮ್ಮ ಮಾನಸಸರೋವರದಿ ಅಂತರಂಗದ ಸಾಗರದಿ
ನಿನ್ನ ನವಯುಗದ ಸ್ಮೃತಿಯ ಸತ್ವಕಣಕಣವನ್ನು
ಬೆರಸಿರುವೆವೇ ? ನಿಚ್ಚದಿರವಾಗಿ ಇರಿಸಿರುವೆವೇ ?
ನಾವೆಲ್ಲ ಒಂದೆಂಬ ಪ್ರೀತಿಯ, ಸಮರಸದ, ಸಹನೆಯ
ತಿರುತಿರುಗಿ ಬರುವ ಊರ್ಮಿಗಳಲ್ಲಿ ಮುಳುಗೇಳುತಿರುವೆವೇ ?
ನಿನ್ನ ದೇಹವನಗ್ನಿಗೆ ಕೊಟ್ಟ ಮರುಚಣದಿಂದ
ನಿನ್ನ ತತ್ವವನು ಸುಡುವಂತೆ ಕೋಪತಾಪದಲಿ
ಸ್ವಜನದ ಮೇಲೆ ಅಗ್ನಿಪ್ರಳಯವನು ನಡಸಿದೆವು,
ನಿನ್ನ ಆತ್ಮಕೆ ಶಾಂತಿ ದೊರೆಯುವುದೆಂಬ ಭ್ರಮೆಯನಡಸಿದೆವು.
ಮೋಸದ, ಸುಲಿಗೆಯ, ಮೇಲುಕೀಳೆಂಬ ಭೇದದ, ಅಧಿಕಾರಮದದ
ನೂರುತರದ ಹಿಂಸೆಯಲಿ ಹೊರಳುವ ನಾವು
ನಿನ್ನ ಹೆಸರಿನ ಬೀದಿಗಳ ತುಳಿದು,
ಊರುಗಳ ಗುಡಿ-ಗುಂಬಾರಗಳ ಕಟ್ಟಿ
ಗಾಂಧಿದೇಶವಿದು ಎಂಬ ಆಭಾಸವನು ಹುಟ್ಟಿಸುವೆವು,
ನಿನ್ನ ಸ್ಮಾರಕವು ನಿನ್ನ ಮಾರಕವಾಗುವಂತೆ.
ಸರ್ವಸಾಕ್ಷಿಯ ತೇಜೋಂಶವೆ! ಗಾಂಧಿಗುರುವೆ,
ಮರಣವನು ಗೆದ್ದು ನಿಂತ ಪ್ರೀತಿಯ ಅವತಾರವೆ,
ಮುಗಿಯದೀ ನಾಡಿನ ನರಕದಲ್ಲಿ ಮತಿಗಾಣದ ಮರಳುಗಾಡಿನಲ್ಲಿ
ನೀ ಚಿರಂತನ ಮೇಘವಾಗಿ ನೆಲೆನಿಂತು ಮಿಂಚುವ ಕಣ್ತೆರೆದು
ಸನ್ಮತಿಯ ನಿರ್ಮಲ ಪ್ರೀತಿಯ ಅಮೃತವರ್ಷವನು ಕರೆ,

ಒಂದಾಗಿರೊಂದಾಗಿರೆಂಬ ಮಂತ್ರವನು ಕಿವಿಕಿವಿಯಲೂದಿ
ಭವ್ಯದಿವ್ಯ ರಾಷ್ಟ್ರವನು ಕಟ್ಟುವುದಕೆ ಎಲ್ಲರ ಕರೆ.
ಅಳಿಯದಿರು, ಕಣ್ಮರೆಯಾಗದಿರು, ಶಾಂತಿಯಿದು ದೊರೆಯದಿರು
ಮನೆಮನೆಯ ಹೃದಯಹೃದಯಗಳಲ್ಲಿ ಸುಖಶಾಂತಿ,
ನಾಡಿನೊಲುಮೆ, ಜನದೊಲುಮೆ ನೆಲೆಗೊಳ್ಳುವರೆಗೆ.
ನಮ್ಮ ಮನದಲ್ಲಿ ಹಗೆತನದ ಹೊಟ್ಟೆಯುರಿಯ ಕೀಳು ಹಿಂಸೆಯ ಅಲೆಗಳೆದ್ದಾಗ
ಕುರುಡು ಕಾಮದ ಸೆಳೆತಗಳು ನೆಳೆಮಿಂಚಿನಂತೆ ಸುಳಿದಾಗ
ದುಃಖಪೂರವು ಬಂದು ಮೋರೆವರಿದು ಮೈಮನವ ಮುತ್ತಿದಾಗ
ನಡೆನುಡಿಬೇರೆತನದ ಗೋಡೆಗಳ ಕಟ್ಟಿ
ಜಾತಿಪಂಥದ ಹಳೆಯ ಹೊಸ ಭೇದಗಳು ಹುಟ್ಟಿ
ಒಡಕುಹದ್ದಿನ ಬಾಯ್ಗೆ ನಾಡಪುರುಷನನು ನಾವು ನೀಡಿದಾಗ
ನೀ ಕಣ್ಗೆ ಕಾಣದ ರೂಹಿನಲಿ ಬಂದು ನಿಂದು
ನಿನ್ನಮರ ಸಂದೇಶವನು ಬೀರು, ಸತ್ಪಥವ ತೋರು
ತಿಳಿಯದಂತೆಮ್ಮ ಬಾಳನು ತೊಳಗು, ಬೆಳಗು !
ನಾವು ಬೆಳೆದು ಬಾಳುವುದನು ಕಂಡು ನಲಿವುಂಡು ತಣಿವುಕಡಲಲ್ಲಿ
ಮುಳುಗು !



# ಗಾಂಧಿಕಿರಣ

ಅಂದಿಗಿಂದು ಮೊಳಗುತಿಹುದು
ಒಂದೆ ದೈವವಾಣಿಯು :
" ಪ್ರೀತಿಯೊಂದೆ ಎಲ್ಲ ನೀತಿ
ವಿಶ್ವವಾಳ್ವ ರಾಣಿಯು ". ॥ ಪ ॥

ಪ್ರೀತಿಗಿಲ್ಲ ಯಾತಕೆಂಬ
ಅತಿಯು ಮಿತಿಯು ಭೇದವು
ಅವರಿಗಿವರಿಗೆಂಬ ಎಲ್ಲೆ
ಇಲ್ಲ ಯಾವ ಬಂಧವು. ೧

ಸುರಿವ ಮಳೆಗೆ ಹರಿವ ಹೊಳೆಗೆ
ಬಿಸಿಯು ತಂಪು ಕಿರಣಕೆ
ತಡೆವರಾರು ? ಕಡೆವರೆಲ್ಲ,
ಅಳುಕದೊಲವು ಮರಣಕೆ. ೨

ಜೀವಜಾತವೆಲ್ಲವಿದಕೆ
ಪ್ರೀತಿಯಿಂದ ಜನನವು
ಬೆರೆತು ನಲಿದು ಬಾಳುವುದಕೆ
ಪ್ರೀತಿಯಿಂದ ಜತನವು. ೩

ಒಡಲ ಪ್ರೀತಿಯಿಂದ ಮೊದಲು
ನರನು ನರನ ಕಾಡಿದ.
ಅರಸು ಮೆರೆದು ಆಳ ತುಳಿದು
ಇಳೆಯ ನರಕಮಾಡಿದ. ೪

ಮುಂದುವರಿದ ಬದುಕದಿಂದು
ಹೊಂದಿ ಬದುಕದಾಗಿದೆ
ಹೊರಹೊಳಪಿನ ಸೊಂಪುಸವಿಗೆ
ಹೃದಯಮಾರಿಕೊಂಡಿದೆ. ೫

ಮೋಹಮೋಸ ನೇಹವೆಂಬ
ಹೆಸರುತಾಳಿ ಮೆರೆಯುತ
ಸುಳ್ಳುದಾರಿಯಲ್ಲಿ ಬಾಳಿ-
ನೆಲ್ಲ ಬಲವನೆಳೆಯುತ— ೬

ಮುಗಿಲು ಕವಿದು ದಾರಿಯುರಿದು
ಕತ್ತಲಾದ ನೆಲದಲು
ಬಂದಿತಿಂದು ಗಾಂಧಿಕಿರಣ
ಪ್ರೀತಿಪಥವ ಬೆಳಗಲು. ೭

ತನ್ನ ಬಾಳ ಶುಚಿಯಗೈದು
ಸಾರಿತದರ ರೀತಿಯು :
'ಪ್ರೀತಿಯೊಂದೆ ಜಗದ ಸತ್ಯ,
ಸತ್ಯವೆನ್ನ ಪ್ರೀತಿಯು'. ೮

"ಪತಿತದಲಿತವೆಲ್ಲ ಜನದ
ನೋವು ನಲಿವು ನನ್ನವು
ನೋವು ಕಳೆಯೆ ನಲಿವು ಬೆಳೆಯೆ
ನನ್ನ ಬಾಳು ಸಫಲವು ೯

ಮನವೆ ಪ್ರೀತಿ ಮೈಯೆ ಪ್ರೀತಿ-
ಯಾದರದುವೆ ಸೇವೆಯು.
ಕೆರಳಿದಂಥ ಕಡಲಿನಲ್ಲಿ
ಅದುವೆ ನನಗೆ ನಾವೆಯು ೧೦

ಎಲ್ಲ ತಮವನೆಲ್ಲ ಮದವ-
ನೊಲವುದುಂಬಿದೆದೆಯಲಿ
ಇದುರಿಸುತಲಿ ಅದುರಿಸುವೆನು
ಹಗೆಯು ಭಯವು ಅಳಿಯಲಿ. ೧೧

ನನ್ನಹಿಂಸೆ ಪ್ರೀತಿಯೆಂಬ
ಹಿರಿಯಬಾಳ ಮಂತ್ರವು
ಅದುವೆ ಜಪವು ಅದುವೆ ತಪವು
ಅರಿದ ಮನದ ತಂತ್ರವು." ೧೨

ಇಂತುಸಾರಿ ಜಗವ ಬೆಳಗಿ
ಹೊರಟಿತಯ್ಯ ಕಿರಣವು
ಕೊಲ್ಲಲಿಲ್ಲ ಅದನು ಸುತ್ತಿ
ಮುತ್ತಿ ಬಂದ ಮರಣವು. ೧೩



# ಏನು ಬಂತೋ ಕಾಲ

ಏನು ಬಂತೋ ಕಾಲ
ರುದ್ರದೇವನ ಶೂಲ
ತಿವಿಯುತಿದೆ ತುಳಿಯುತಿದೆ
ಭೂವ್ಯೋಮಪಾತಾಲ ! ೧

ಕಾಳಗದ ಡಮರುಗದ
ಆಘೀಳವಾನಾದ
ಭುವಿಯೆಲ್ಲ ಮೂಲೆಯಲಿ
ಹುಟ್ಟಿಸಿದೆ ನಿರ್ಹ್ರಾದ. ೨

ಮನುಜಮದವನು ಕೆಣಕಿ
ದನುಜರಾಗಿಸಿ ನೂಕಿ
ಕೋಟಿ ಇರುವೆಗಳಂತೆ
ಸುಟ್ಟಿಹುದು ಅಡಿಬೆಂಕಿ. ೩

ಅಕರಾಳ ವಿಕರಾಳ
ತೂರುತಿದೆ ಮೈಸೀಳ
ಯಾರೇನು ಎಲ್ಲರನು
ಇರಿಯುತಿದೆ ಕರವಾಳ. ೪

ಹುಳತಿಂದು ಒಳಕೊಳೆತು
ಹೊರಹೊಳಪಿನಲಿ ಮಲೆತು
ನಿಂತ ಹೆಮ್ಮರವೆಲ್ಲ
ಕೆಳಬೀಳುತಿವೆ ಕಲೆತು. ೫

ಎಂದಿನಂತಿರೆ ಸೃಷ್ಟಿ
ಅಂದಗೆಟ್ಟಿತು ದೃಷ್ಟಿ
ಉರಿಸುತಿರೆ ನೆಲಜಲವ
ಗುಂಡುಬಾಂಬಿನ ವೃಷ್ಟಿ. ೬

ಸತ್ಯನ್ಯಾಯವ ಹಿಸುಕಿ
ಹಿಳಿದ ಜಗವನು ಮುಸುಕಿ
ದಂಡಿಸುವ ಯಮಧರ್ಮ
ಹೊಸಶಸ್ತ್ರಗಳನಮುಕಿ. ೭

ಸವಿಬಾಳಿನಾಸೆಯಲಿ
ಮುಕ್ತತೆಯ ಯಾಗದಲಿ
ದನುಜ ಸುರಿಯುವ ರಕ್ತ
ಬಿದ್ದು ಹೊಗರೇರಿಸಲಿ— ೮

ಬಂದುದೆಲ್ಲವು ಬರಲಿ
ಪ್ರಳಯವಾದರು ಇರಲಿ
ಹೊಸಹುಟ್ಟು ಸಾರುತಿಹ
ತಾಂಡವದ ಉರಿಯಿರಲಿ — ೯

ಸತ್ಯವನು ಮಾರ್ಕೊಂಡು
ಸಾವುನೋವನು ಕಂಡು
ಬಾಳ್ವಬಂಟನೆ ಬೇಕು
ಅವನೆ ಇಂದಿನ ಗಂಡು. ೧೦

# ವಿಜಯ ದಿನ

( ಮುಕ್ತಛಂದದಲ್ಲಿ )

ವಿಜಯದಿನವಿಂದು !
ದಿಕ್ಕುದಿಕ್ಕಿನಲಿ ಕೇಳುವುದೇನು ಹಿಗ್ಗಿನ ಕುಣಿತಗಳ ದುಂದು !
ಎರಡನೆಯ ಮಹಾಯುದ್ಧ ಮುಗಿದು ಭೂತಕಾಲದ ಕತ್ತಲೆಮನೆಯ
ಸೇರಿತಕೋ
ಅಸ್ತವೆಂಬುದರಿಯದ ಶಾಂತಿಸೂರ್ಯನ ಶುಭೋದಯವಾಯಿತೀಗ !
ಸತ್ಯಗೆದ್ದಿತು, ನ್ಯಾಯ ಹೊಡೆಮರಳಿ ಎದ್ದಿತು !
ಇನ್ನೇನು, ನಾಲ್ಕು ಸ್ವಾತಂತ್ರ್ಯಗಳು ನೆಲೆಗೊಳ್ಳುವವು !
ಪ್ರಜಾಸತ್ತೆಯದು ತಲೆಯೆತ್ತಿ ಸರ್ವಾಧಿಕಾರಿ ರಾಕ್ಷಸರ ಕಾಲಬುಡದಲ್ಲಿ
ತುಳಿದು
ಸರ್ವಮಂಗಲೆಯಂತೆ ಸಕಲಮಾನವರ ಮುಖಮುಖದಲ್ಲಿ ಸುಖ-
ಸಂತೋಷವನು ಸೂರೆಮಾಡುವುದು !
ಎಲ್ಲರು ಕಂಡ ಸುಖಸ್ವಪ್ನಗಳು ಸತ್ಯಸೃಷ್ಟಿಯಲಿಳಿದು
ಸುತ್ತಲೂ ಸುಳಿಯುವವು ನಂದನವನದ ಸವಿಬೀರಿ !
ಜರ್ಮನಿಯು ನರ್ಮ್ಮಯ್ತು, ಜಪಾನು ಜರ್ಜರವಾಯ್ತು,
ಮಿತ್ರರಿಗೆ ಗೆಲವಾಯ್ತು. ಓಹೋ ! ಹುರ್ರೇ ಹುರ್ರೇ !
ಇಂತಿಂತು ತರತರದಿ ನೆನೆಯುತ್ತ ನಲಿಯುತ್ತ
ಮಿತ್ರರಾಷ್ಟ್ರದ ರಾಜಧಾನಿಗಳಲ್ಲಿ ಹಳ್ಳಿನಗರಗಳಲ್ಲಿ
ಸೈನ್ಯಶಿಬಿರಗಳಲ್ಲಿ ಹಡಗದಂಗಣದಲ್ಲಿ ಎಲ್ಲೆಲ್ಲಿ
ಬಿಳಿಜನವು ಹಿಗ್ಗುಮರಳಿನ ಹೊಳೆಯಲ್ಲಿ ಮುಳುಗೇಳುತಿಹುದು.
ಸುದ್ದಿ ತಿಳಿದೊಡನೆ ನೆಗೆದೆದ್ದ ಗಂಡು ಹೆಣ್ಣಿನ ಗುಂಪು
ಬೀದಿಬೀದಿಗಳಲ್ಲಿ ನೆರೆನೆರೆತು ಯಾರೊ ಯಾರನೊ ಅಪ್ಪಿ
ಮುದ್ದಿಸುತಿಹರು, ಕೇಕೆಹಾಕುವರು, ನೂಕುನುಗ್ಗಲಾಗುವರು.
ಚರ್ಚಿನ ಘಂಟೆ ಹಿಗ್ಗಿನಲಿ ಆಚೀಚೆ ತೂಗುತ್ತ

ಗಣಗಣಿಸುವವು, ಸಾಮ್ರಾಜ್ಯಧ್ವಜ ಫಡಫಡಿಸುವವು.
ಲೆಕ್ಕವಿಲ್ಲದೆ ತೋಪುಹಾರುವವು ಹಗೆಗಳಿಗೆ ಸಾವು ಸೋಲನು ತಂದ ತಾವೀಗ
ತಮ್ಮಯ ಗೆಲವುಸಾರಲು ಎಂದು ಸ್ವರ್ಗಕ್ಕೆ ಸಂದೇಶ ಕಳುಹುವಂತೆ.
ಯುದ್ಧಕ್ಕೆ ಬಲಿಯಾಗಿ ಮಕ್ಕಳನು ಕೊಟ್ಟ ದೀನಲೀನಮಾತೆಯರು
ಮನೆಕಿಡಿಕಿಯಿಂದ ಹೊರಗೆ ನೆರೆಯಾಗಿ ಹರಿಯುವಾ
ಹರುಷಹೊಳೆಯನು ನೋಡಿ ನೋಡಲಾರದೆ
ಕಂಬನಿ ಮಿಡಿಯುವರು, ಮುಖಮುಚ್ಚಿಕೊಳ್ಳುವರು, ಎದೆಬೆಂದು ಮನನೊಂದು.

ವೀರಪತಿ ಮರಳಿ ಮನೆಗೆ ಬರುವನು ಇನ್ನು
ಎಂದೀಸುದಿನ ಬಳಲಿ ಬಾಡಿದ ಮಡದಿ ಮೊಗವರಳಿ
ಕೊಂಬಿಸಿಲತ್ತೊಡೆದ ಸುಕ್ಕುಬಳ್ಳಿಯು ಹಾಗೆ ಉಕ್ಕುವಳು
'ನಿಮ್ಮ ತಂದೆ ಬರುವನು ಮನೆಗೆ' ಎಂದು ಮಗುಗಳನಪ್ಪಿ
ಮುಂಡಾಡಿ ಹೇಳುವಳು ತಿರುಗಿ ತಿರುಗಿ.
ಬಾಂಬುಗಳ ಒರಸಿಡಿಲಿನೇಟಿಗೆ ಭೂಮಿ ಗದಗಮಿಸುತಿರೆ
ನೆಲಗವಿಯ ಸೇರಿ ಹೆದರಿ ಮುದುರಿದ ಮೂಕಜನರು
ಯುದ್ಧಮುಗಿಯಿತೆಂಬುದೆ ತಡ ಹೊರಬಂದು ತಲೆಯೆತ್ತಿ
ಬಿದ್ದ ಕಟ್ಟಡದ, ಮುರಿದ ಮನೆಗಳ, ಹಾಳು ಬೀದಿಗಳ ಕಂಡರೂ
ಕಂಬನಿಗರೆಯುವಲೆ ಮುಚ್ಚಿದ್ದು ಕುಣಿಯುವರು, ತಣ್ಣನೆ ತಣಿಯುವರು.

* * *

ಇಲ್ಲಿ ಭಾರತದಲ್ಲಿ ವಿಜಯದಿನವೆಂದರೆ ರಜೆಯದಿನ,
ಮಾಮೂಲಿ ಮೆರವಣಿಗೆ, ಚಹತಿನಿಸು, ಸಭೆಸಮಾರಂಭ,
ಹಳ್ಳಿಪಟ್ಟಣಗಳಲಿ ಕಚೇರಿ-ಚಾವಡಿಯಲ್ಲಿ ದೀಪೋತ್ಸವ.
ಬಹುಜನರೆ ಉಸ್ಸೆಂಬ ಉಸಿರೆಳೆತ.
ಯುದ್ಧ ಮುಗಿಯಿತೆ ಇಂದು, ಅನ್ನ ಸಿಗುವುದೆ ಇನ್ನು,
ಬಟ್ಟೆ ದೊರೆವುದೆ ಗತ್ತಿಗತ್ತಿಯಾಗಿ, ಧಾರಣೆಗಳಿಲ್ಲಿ ಇಳಿಯುವವೆ?
ಕಂಟ್ರೋಲು—ಕಳ್ಳಪೇಟೆಗಳು ಕಳ್ಳನಡೆಯಿಂದ ಮಾಯವಾಗುವವೆ?

ಬರಗಾಲವೂಮಾರಿ ಮೃತ್ಯುಪಾಶದಿ ಬಿಗಿದು ನಿಲ್ಲಿಸಿದ
ತನ್ನ ಡೇರೆಯನು ಕಿತ್ತುವಳೆ ನಾಡಿನ ಮೂಲೆಮೂಲೆಯಿಂದ ?
ದಾಸ್ಯದ ಕೋಳ ಕಳಚುವುದೆ ?
ನವಮುಕ್ತರಾಷ್ಟ್ರವೇಳುವುದೆ ಇಂದಿನೀ ಪ್ರಳಯಸಮಸಂಹಾರಸಂಕಟ
ರಾಶಿಯಿಂದ ?
ಯಾರು ಬಲ್ಲರು ? ಬರುವುದೆಂತೇ ಇರಲಿ, ಇಂದಿನೀ ಚಿತ್ರ ಪರಮವಿಚಿತ್ರ!
ದಿನದಿನದ ಪತ್ರಿಕೆಯ ತಿರವೃತ್ತ ತಿಳಿದ ಕೆಲಸುದ್ದಿಗಳಿವು :
'ಜಪಾನು ಶರಣುಬಂದಿತು, ಪರಮಾಣುವೇ ಅದಕೆ ಮರಣವಾಯಿತು'
'ಎಲ್ಲ ಕಡೆ ಹರ್ಷೋನ್ಮಾದ, ಶಾಂತಿಗೀತನಿನಾದ'
'ಭಾರತವು ಏಸಿಯವು ಮುಕ್ತವಾಗದೆ ಸಾಮ್ರಾಜ್ಯದಾಹವಾರದೆ
ಎಂಥ ಶಾಂತಿ ? ಮಸಣ ಶಾಂತಿ !
ಮೂರನೆಯ ಯುದ್ಧದ ಅಗ್ನಿಕಾಂತಿಯನು ಬಚ್ಚಿಟ್ಟ ಸುಳ್ಳುಶಾಂತಿ !'
ಮುನ್ನೋಟ ಹರಿತಾದ ಮುಂದಾಳುವೊಬ್ಬನ ಭವಿಷ್ಯವಾಣಿಯಿದು.
'ಚುಂಗ್‌ಕಿಂಗ್ ರಾಜಧಾನಿಯಲಿ ಚೀನಿಯರ ಕುಣಿದಾಟ'
'ಟೋಕಿಯೋದಲಿ ಯುದ್ಧಮಂತ್ರಿಯ ಆತ್ಮಹತ್ಯೆ'
'ಇಂಗ್ಲಂಡ-ಅಮೇರಿಕೆಗಳಲಿ ವಿಜಯೋತ್ಸವದ ಮಹಾಪೂರ'
'ನಾ ಸತ್ತಿಲ್ಲ ಬದುಕಿರುವೆನೆಂದು ಹಿಟ್ಲರನ ಗುಪ್ತ ಆಕಾಶವಾಣಿ'
'ನಮ್ಮ ನಾಡಿನಲಿ ಗಾಂಧಿಜಿಯವರ ಇನ್ನೊಂದು ಉಪೋಷಣ ಭಯ'
'ಮಹೇಂದ್ರ ಚೌಧರಿಯು, ಇನ್ನುಳಿದ ಹುತಾತ್ಮರ ನೆನೆನೆನೆದು
ಭುಗ್ಗೆಂಬ ಒಡಲುರಿಯ ತ್ವೇಷ. ಸ್ವಾತಂತ್ರ್ಯದಾಹ'
'ತನ್ನ ಮೊದಲಿನ ಮಂಗಳಗೌರಿಯ ಪೂಜೆಗೆಂದು
ಸಂಪಿಗೆಯ ಮರವೇರಿ ಕೆಳಗೆ ಬಾವಿಯಲಿ ಬಿದ್ದು
ಮರಣವಪ್ಪಿದ ತರುಣಿ' ಇತ್ಯಾದಿ ಇತ್ಯಾದಿ.
ಇದನೋದುತಿರುವಂತೆ ದಿಙ್ಮೂಢವಾಯಿತು ಚಿತ್ತ.
ಈ ಬರೆಯಲಾರದ ನೂರು ಬಣ್ಣದ ವಿಶ್ವಚಿತ್ರವ ಕಂಡು ಕಳವಳಿಸಿ,
'ಏನಿದು ? ಎಂತಿದರ ಕೊನೆ ?' ಎಂದು ನನ್ನೊಳಗೆ ಕೇಳಿದೆ, ಕೂಗಿದೆ.

* * *

ಕೂಡಲೆ ಕಣ್ಣೆದಿರು ನಿಂದಿತು ಪರಮಾಣುಬಾಂಬು !
ವಿಜ್ಞಾನಿಗಳ ಬುದ್ಧಿದಿಗ್ವಿಜಯವನು ಸಾರುವ ಈ ಅಸ್ತ್ರ
ಛತ್ರಿಯಾಕಾರದಲಿ ತಾನಿದ್ದು ಮೃತ್ಯುವನು ಹಡೆದಂತೆ
ಲಕ್ಷಾವಧಿ ಜನವುಳ್ಳ ನಗರವನು ನಡುಗಿಸುತ ಸುಟ್ಟು ಬೂದಿಮಾಡುವದಂತೆ.
ಅಂತೆಯೇಕೆ ? ಈ ಚಕ್ರದಾಘಾತದಲಿ ಹಿರೋಶಿಮಾ ನಾಗಾಸಕಿ
ಹಾಳುಬೀಳಿನ ಕೊಂಪೆಯಾದವು, ಶವಸಾವಿರದ ಗುಂಪೆ ಆದವು.
ಎಂಥ ನರಹತ್ಯ ! ಎಷ್ಟು ಜೀವಗಳು ಹುರಿಪಳಿಸಿದವು ಈ ಹೋಮದಲ್ಲಿ !
ಯುದ್ಧವೇನೆಂದರರಿಯದ ಹಾಲುಹಸುಳೆಗಳೆಷ್ಟು
ಉರಿಗೊಂಡದಲಿ ಸಿಲುಕಿ ಕಮರಿದ ಹೂಗಳಂತಾದವು !
ತಮ್ಮ ಪಾಡಿಗೆ ತಾವು ದುಡಿದು ಬದುಕಿದ ಜನವೇಸೇಸೊ
ಸಂಸಾರರಥವನ್ನು ಕ್ಷಣದಲ್ಲಿ ಮೃತ್ಯುವಿನ ಮನೆಯತ್ತ ಸಾಗಿಸಿದರು !
ಅಬ್ಬ ! ನೆನೆಯಲಾರೆ ! ಮೈಮುರಿವ ನೋವು ಮುತ್ತುವುದು,
ಕಂಬನಿಯು ಕಣ್ಣನೊತ್ತುವುದು, ಇಂದಿನೀ ನಾಗರಿಕತೆಯೆಲ್ಲ
ಮಸಣಮಾರಿಯು ಆಗಿ ಬದುಕಿನಾ ಕಣಕಣವನ್ನು ಹರಿದುತಿನುವಂತೆ
ತೋರುವುದು.
ಮೇಲೆ, ಆ ಶೌರ್ಯವನು ಗೈದ ವೈಮಾನಿಕ ಮಹಾಶಯಗೆ
ಪದಕವನ್ನು ಕೊಟ್ಟು ಮಾನಮಾಡಿದರಂತೆ.
ಸರಿ ಸರಿ, ಮುಯ್ಯಕ್ಕೆ ಮುಯ್ಯ !
' ನೀವೇನು ಸಾಧುಗಳೆ ? ಕ್ರೌರ್ಯಕ್ಕೆ ಪ್ರತಿಕ್ರೌರ್ಯ. ' ಎಂಬ
ಮಾರ್ನುಡಿ ಬಲ್ಲೆ.
ಯುದ್ಧವನು ಮುಗಿಸಲು ಬಂದ ಈ ಪರಮಾಣು
ಮತ್ತೊಂದು ಯುದ್ಧವನು ಚಿಗಿಸೀತು,
ನಿಮ್ಮಸ್ತ್ರ ನಿಮ್ಮ ಮೇಲೆಯೆ ನೆಗೆದೀತು
ಎಂಬ ಜಾಣರೆಚ್ಚರಿಕೆಯನ್ನಾರು ಕೇಳುವರೀಗ ?
' ನಮ್ಮ ಕೈಯಲಿದೆ ಈ ಪರಮಾಣುವಿನ ಆಟ '
ಎನ್ನುವರು ವಿಜ್ಞಾನಿಗಳು, ಯುದ್ಧನೇತರು, ರಾಜಕಾರಣಿಗಳು.!

* * *

ಅಣೋರಣೀಯಾನ್ ಮಹತೋ ಮಹೀಯಾನ್
ಎಂದು ಬಣ್ಣಿಸಿಕೊಂಡು ಜಗವನಾಳುವ ಅದ್ಭುತ ಅನಂತವೆ!
ನೀನೆಲ್ಲಿರುವೆ, ಎತ್ತ ಅಡಗಿರುವೆ ಎಂದು ಕೇಳುವ ಭಾವಿಕಮನಕೆ
ಕಾಲಯಮನ ಕಿಡಿಕಿಡಿಕೋಪಜ್ವಾಲೆಯಂತಾಗಿ
ಈ ಪರಮಾಣುವಿನಸ್ತ್ರದಲಿ ನೀ ಕೊನೆಗೆ ತೋರಿದೆಯ?
ನಂಬಲಾರೆನು, ನಂಬದಿರೆ ಗತಿಯಿಲ್ಲ.
ಯುದ್ಧವಾದರು ಬುದ್ಧಿ ಬಾರದು ಮತ್ತಚಿತ್ತಕೆ ಎಂದು
ಕ್ಷಣದ ವಿಪ್ಲವದಿಂದ ಮಾನವತೆಯ ಮಹಾವಿಪ್ಲವವನು ಸೃಷ್ಟಿಸಿದೆಯ?
ನೀ ನಿರ್ಮಿಸಿದ ಹೊರಗಣಸುರರ ಕಂಡು ಕೆರಳಿದ
ವೀರಧೀರರು ಅಧಿಕಾರಮತ್ತ ಸತ್ತಾಧಾರಿಗಳು
ತಮ್ಮೊಳಗಿನ ಅಸುರಸಂಹಾರವನು ಮಾಡದಲೆ
ಹೊರಗೆಲುವ ಮೃಗಜಲವ ಬೆಂಬತ್ತಿ ನಡೆದರೆಂದೇನೊ
ನಿನ್ನೊಂದು ಸಿಡಿಲೇಟಿನಲಿ ಅದನು ತಟ್ಟನೆ ತಡೆದೆಯ?
ತಮ್ಮದೆ ಸತ್ಪಕ್ಷವೆಂದವರು ಬಗೆಯರೇ ನೆಗೆಯರೇ ಒಗ್ಗಿನಿಂದ?
ಸದಸತ್ತುಗಳ ಯುದ್ಧವೆ ಇದು?
ರೀತಿನೀತಿಗಳು ಬೇರಾದರೂ ಲೋಭಲೋಭದ ಹೋರಾಟವಲ್ಲವೆ ಇದು?
ಪರಮಾಣುವಿಂದ ಜಗಹುಟ್ಟಿತೆಂದೀವರೆಗೆ ಕೇಳಿದ್ದೆ,
ಪರಮಾಣುವಿಂದ ಜಗಕೆ ಮರಣವೂ ಬಹುದೆಂದು
ಅರಿತೆನಿಂದು ಮರೆಯದಂತೆ ಮನವೆಲ್ಲ ಮರುಗುವಂತೆ.
ಪರಮಪರಮಾಣುವಿಂದ ಜಗಕಟ್ಟಬಹುದು, ಕೆಡುವಬಹುದು.
ಸಂಖ್ಯೆ ಪರಿಮಾಣ ಹಿರಿದಲ್ಲ, ಶಕ್ತಿ ಹಿರಿದು.
ಇದನರಿಯುವರೆ ಜಗವನಾಳುವೆವೆಂಬ ಜಂಬದ ಮತಿವಂತರು, ಬಲವಂತರು?
ಇಂದು ಕತ್ತನು ಹಿಸುಕಿ, ಪ್ರಾಣವ ಹಿಂಡಿ
ನೆಲದೊಳದಿ ನೀರಿನಲಿ ಹುಗಿದೊಗೆದ ತತ್ವಗಳು ಚೆನ್ನಿರಲಿ ಕೆಡಕಿರಲಿ,
ಮತ್ತೆ ಪರಮಾಣುವಾಗಿ ಅವತರಿಸಲಾರವೆ?
ಅಣೋರಣೀಯಾನ್ ಆಗಿದ್ದು ಬರಬರುತ ಮಹತೋ ಮಹೀಯಾನ್
ಆಗವೆ?

ಅಸುರರಳಿದೇನು ಅಸುರತ್ವವಳಿಯದನಕ ?
ಗೆಲವು ಏನುಸಲ ಬಂದೇನು ? ಅದರ ಸವಿಯನ್ನೆಲ್ಲ ಜಗಕೂ
ಹಂಚುವ ಹಿರಿಮನದ ಒಲವಿಲ್ಲದನಕ ?
ತತ್ವದ ಮಾತು, ಸಭ್ಯತೆಯ ಸೋಗು
ಕೃತಿಯೆಲ್ಲ ಕೀಳು, ಕುಟಿಲತೆಯೆ ಬಾಳು
ಆಗಿರುವನಕ ಎಲ್ಲಿಯ ಸುಖ ? ಎಲ್ಲಿಯ ಶಾಂತಿ ?
ಸತ್ಯಶಿವ ಸುಂದರವು ಜಗವನಾಳುವುದು ನಿಜನಿಜವು
ಅದನರಿತು ಮನಮುಟ್ಟಿ ಅದರಡಿಯೊಳು ಆಗಿರಲು ಮಾತ್ರ.
ಇಂದಿನೀ ಜಗ ಅದರ ಹುಸಿಭಕ್ತನಂತೆ, ಪೂಜೆಯರಿಯದ ಪೂಜಾರಿಯಂತೆ.
ಒಳಒಳಗೆ ರೋಗ ತಳವೂರಿರಲು ಮೈಯೆಲ್ಲಿ ಸಡಿಲಿ ನಾರುತಲಿರಲು,
ಮೇಲೆ ತಾ ಆರೋಗ್ಯವಂತನಾಗಿ ತೋರಿ ಮೆರೆಯುವವನಂತೆ
ಈ ಲೋಕ ಮೆರೆಯುತಿದೆ,
ಸುಲಭದಲಿ ಸವಿಮಾತಿನಲಿ ಮೋಸದಲಿ ಲೇಸುಹಣ್ಣನು ಬಯಸಿ
ಕೈಚಾಚಿ ದೊರೆಯಿತೆಂಬ ಭ್ರಮೆಯಿಂದ ಭ್ರಮಿಸುತಿದೆ.
ಕಾಳಗವೆ ಬೇಕಿದರ ಭ್ರಮನಿರಸನಕೆ.
ಯುದ್ಧರೋಗಕೆ ಕೊನೆಯುಂಟೆ ಆರೋಗ್ಯದ ನಿಜಸೂತ್ರವರಿಯದ
ಲೋಕಜೀವನಕೆ ?

ಕಾಮವನು ಲೋಭವನು ಬೇರೊಡನೆ ಕಿತ್ತೊಗೆದು
ಪ್ರೀತಿ–ತಪ–ತ್ಯಾಗಗಳು ವ್ಯಷ್ಟಿಯಲಿ ಸಮಷ್ಟಿಯಲಿ
ತಲೆದೋರಿ ಅಧಿಮನದ ಅಧಿರಾಜ್ಯವೆದ್ದಾಗ
ಸತ್ಯಲೋಕದ ಕ್ಷಿತಿಜ ಸುಳಿದೀತು ಕಣ್ಣಮುಂದೆ,
ವಿಜಯದಿನ ನಿಜದಲ್ಲಿ ಉದಿಸೀತು ಅಂದು ಅಂದೆ !

# ತಾಯಿ ಶಾಂತಿ

ತಾಯಿ ಶಾಂತಿಯೆ ತಾಯಿ ಶಾಂತಿ
ಬಾರೆ ನೀ ಮೈವೆತ್ತು ಬಾರೆ
ಜೀವಜೀವದ ಧ್ರುವದ ತಾರೆ
ಮರ್ತ್ಯಲೋಕದ ಅಮೃತಧಾರೆ!

ನಾವು ಕಟ್ಟಿದ ನೆಲದ ಕೂಸಿದು
ಹುಚ್ಚುಕಣ್ಣೀರಿನಲಿ ಹೊರಳುತ
ನಿನ್ನಯಪ್ಪುಗೆ ಮುದ್ದು ಸವಿಯನು
ಬಯಸಿ ಹಲುಬುತ ಬಾಯಿಬಿಡುತಿದೆ. ೧

ಕಲಹ ಕೋಲಾಹಲವೆ ತನ್ನಯ
ಬಲೆಯ ಬೀಸುತ ಜೀವರಾಶಿಯ
ಸೆಳೆಯುತೆಲ್ಲೆಡೆ ತಿಕ್ಕಿ ಮುಕ್ಕಿದೆ
ಪ್ರಳಯರುದ್ರನ ಬರವ ಸಾರುತ ೨

ನೂರುಹೆಡೆಗಳ ಹಿಂಸೆಯಜಗರ
ತೋರಿ ಮನುಜರ ಬಾಳ ಸವಿಯನು
ಹೀರಿ ಹಿಪ್ಪೆಯಮಾಡಿ ಹಿಗ್ಗುತ
ಧಾರಿಣಿಯ ಸುತ್ತಾಡಿ ಸೊಕ್ಕಿದೆ. ೩

ಲಬ್ಧರಕ್ಷಣ ಲೋಭವೊಂದೆಡೆ
ನಷ್ಟಲಬ್ಧಿಯ ಹಂಬಲೊಂದೆಡೆ
ಸೋಲು ಗೆಲವಿನ ಏರು ಇಳಿತದಿ
ಗಾಳಿನೆಲದಲಿ ಹೋರುತಿರುವವು. ೪

ಸುಕ್ಕಿದೊಡಲನು ತುಂಬಲಾರದೆ
ದಿಕ್ಕುತೋರದ ಜನದ ಜಂಗುಳಿ
ಬಂದಕಾಲನ ತುತ್ತುಚೀಲವ-
ನಿಂದು ಸೇರುತ ತುಂಬುತಿರುವುದು. ೫

ಮನೆಮನೆಯಲಿದೆ ಬಿರುಕುಬನ್ನವು
ಮನಮನದಿ ಒಂಕೊರತೆ ಕೊರೆತವು
ಕಾಣದೊಂದುರಿ ಹಬ್ಬಿಕೊಂಡಿದೆ
ತಾಣತಾಣದಿ ಅಸುಖಸುಖದಲಿ. ೬

ಹತ್ತುಕಡೆಯಲಿ ಹರಿವ ಕಾಮನೆ
ಎತ್ತಲೂ ಸುಖಶಾಂತಿ ನೆಲೆಯನು
ಎತ್ತಿಪಡೆಯದೆ ಘೋರಹಗೆಯದಿ
ಕತ್ತಲೆಯು ಬೆಳಕಾಗಿ ಬದುಕಿದೆ. ೭

ಒಂದು ಮತವೇ ? ಒಂದು ಹಿತವೇ ?
ಇಂದು ತಾ ನೂರೊಂದೆ ಮಂತ್ರವು
ಮುಂದುಗಾಣದೆ ಮನುಜಗಜಗಳು
ನಿಂದುಹೋರಲು ಒಂದುಗೂಡಿವೆ. ೮

ದೇಶದೇಶದ ಎಲ್ಲ ಜನಗಣ
ಬಯಸಿ ನಿನ್ನನು ಹರಸಿಹಾಡಿಯು
ಮಸೆದು ಕೈದುವ ಕದನವದಲಿ ಕೈ-
ಬೀಸಿ ನಿನ್ನಯ ದೂರ ಸರಿಸಿವೆ. ೯

ಕಾಳಗದ ವಿಕರಾಳ ಕಾಲದಿ
ಕೇಳು ನಿನ್ನಯ ನೆನವುಕೂಡ
ಬೀಳುನೆಲದಲಿ ಬೆಳೆಯ ಅಂದದಿ
ಹಾಳು ಕನಸಿನ ಕಟ್ಟುಕತೆಯೋ. ೧೦

ಬರಿಯ ಕನಸೇ ? ನಂಬಲಾರೆನು
ಹಿರಿಯ ನನಸೇ ಎಂಬುತಿರುವೆನು
ಜನದ ಗುಂಪಿನ ಚೆಲುವ ಗುಂಫನ-
ವನ್ನು ಗೈಯುವ ನಿಜದ ನೈಜವೆ. ೧೧

ಯೋಗಿಚಿತ್ತದ ಸಾಮ್ಯವನದಲಿ
ಬಾಗಿ ನಿಂತಿಹ ಹಣ್ಣುಹಂಪಲ-
ವಾಗಿ ನೀನೇ ಅಂದಿಗಿಂದಿಗೆ
ರಾಗದ್ವೇಷವ ಮೀರಿ ನಿಂದೆಯೆ. ೧೨

ಗೆಳೆಯ ಗೆಳೆಯರ ನಲ್ಲನಲ್ಲರ
ಬೆಳೆದ ಸಮರಸವೆಂಬ ಕಡಲಲಿ
ನಲುಮೆಲಕುಮಿಯು ಆಗಿ ನೀನೆ
ಒಲಿದು ಬಂದವಳಲ್ಲವೇನೇ ? ೧೩

ಎನ್ನ ಆತ್ಮದಿ ಎಲ್ಲ ಆತ್ಮದಿ
ಚೆನ್ನತಾಯಿಯು ಬೆಳಗು ಬೆಳಗಾ
ನಿನ್ನತೊಡೆಯಲಿ ಎಲ್ಲ ಮನಗಳು
ನಿತ್ಯಮುಕುತಿಯ ಸುಧೆಯನುಣ್ಣಲಿ. ೧೪

ಇಂದು ಕೇಸರಿ ದಿಕ್ಕುದಿಕ್ಕಿಗೆ
ನಿಂದು ನಿನ್ನನು ಮೂದಲಿಸಿದರು
ಮುಂದೆ ತಿಳಿವಿನ ನೀರು ಹಣಿಸುತ
ಬಂದೆ ಬರುವೆನು ಎಂದು ಸಾರೇ ! ೧೫